# ಕೊಡಗು ಸಂಗಾತಿ

ಆಗಸ್ಟ್ 1 ರಿಂದ 15, 2000 ಪಾಕ್ಷಿಕ ಪತ್ರಿಕೆ (ಆಟಿ 16-30 )

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

KA/SK/MYS-88 ಸಂಪುಟ : 4 ಸಂಚಿಕೆ : 15 ಪುಟಗಳು : 24 ಬೆಲೆ ರೂ. : 6-00



ಲೇಖನ : ಒಳಪುಟಗಳಲ್ಲಿ

## ಕೊಡಗು ಜಿಲ್ಲಾ ಪಂಚಾಯಿತಿಯ ಪ್ರಪ್ರಥಮ ಗೌಡ ಮಹಿಳಾ ಅಧ್ಯಕ್ಷೆ ಶ್ರೀಮತಿ ಚಂದ್ರಕಲಾ ಪ್ರಸನ್ನ.

೧೯೯೯ ರ ಕಾರ್ಗಿಲ್ ಸಮರದಲ್ಲಿ ಹೋರಾಡಿ ವೀರ ಸ್ವರ್ಗ ಪಡೆದ ಮತ್ತು ಯೋಧರಿಗೆಲ್ಲರಿಗೂ ಸಂಗಾತಿಯ ನಮನಗಳು.

## ಹಾರ್ದಿಕ ಶುಭಾಶಯಗಳು



ಕೊಡಗು ಜಿಲ್ಲಾ ಪಂಚಾಯಿತಿ ಅಧ್ಯಕ್ಷೆಯಾಗಿ ದಿನಾಂಕ 12-7-2000ದಲ್ಲಿ ಅವಿರೋಧ ಆಯ್ಕೆ ಆದ ಸೋಮವಾರಪೇಟೆ ತಾಲೂಕು ಹೆಬ್ಬಾಲೆ ಕ್ಷೇತ್ರದ ಜಿಲ್ಲಾ ಪಂಚಾಯಿತಿ ಸದಸ್ಯೆಯಾದ ಶ್ರೀಮತಿ ಕಾರೆಕೊಪ್ಪ ಚಂದ್ರಕಲಾ ಪ್ರಸನ್ನ ಇವರಿಗೆ ಹೃತ್ಪೂರ್ವಕ ಅಭಿನಂದನೆಗಳು. ಇವರ ಅಧಿಕಾರ ಅವಧಿಯಲ್ಲಿ ಹೆಚ್ಚಿನ ಯಶಸ್ಸು ದೊರೆಯಲೆಂದು ಈ ಮೂಲಕ ಹಾರೈಸುತ್ತೇನೆ.

— ಪಟ್ಟಡ ಶೀಲಾಮಣಿ ಪ್ರಭಾಕರ, ಸಂಪಾದಕಿ, ಕೊಡಗು ಸಂಗಾತಿ, ಮೈಸೂರು.

---

### ಕೊಡಗು ಗೌಡ ವಿದ್ಯಾ ಸಂಘದ ವಿದ್ಯಾರ್ಥಿ ವೇತನ

ಕೊಡಗು ಗೌಡ ಜನಾಂಗದ ಪ್ರತಿಭಾವಂತ ವಿದ್ಯಾರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ. 1999 - 2000 ಇಸವಿಯಲ್ಲಿ ಏಳನೇ, ಹತ್ತನೆ,ಪದವಿ ಪೂರ್ವ ಮತ್ತು ಪದವಿ ತರಗತಿಯ ಬಿ.ಎ. ಬಿ.ಕಾಂ., ಬಿ.ಎಸ್ಸಿ.,ಯ ವಾರ್ಷಿಕ ಪರೀಕ್ಷೆಯಲ್ಲಿ ಅತೀಹೆಚ್ಚು ಅಂಕ ಗಳಿಸಿದ ವಿದ್ಯಾರ್ಥಿಗಳು ತಮ್ಮ ಅಂಕ ಪಟ್ಟಿಯ ನಕಲು ಪ್ರತಿಯೊಂದಿಗೆ ಕುಟುಂಬದ ಹೆಸರು ಸಹಿತ ಇದೇ ತಿಂಗಳ ಆಗಸ್ಟ್ 7ರ ಒಳಗಾಗಿ ಅರ್ಜಿಯನ್ನು ಸಲ್ಲಿಸಬಹುದಾಗಿದೆ. ಮನೆ ಹೆಸರನ್ನು ನಮೂದಿಸದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ

— ಅಧ್ಯಕ್ಷರು ಮತ್ತು ಕಾರ್ಯಕಾರಿ ಮಂಡಳಿ.

---

### ಲಕ್ಕಪ್ಪನ ರಶೀ ರಘು     ಕಡ್ಲೇರ ನಿಶ ಭಾಗ್ಯಶ್

**ಈ ಪುಟಾಣಿಗಳ 2ನೇ ವರ್ಷದ ಹುಟ್ಟು ಹಬ್ಬಕ್ಕೆ ಶುಭಾಶಯ ಕೋರುವ**

ಕಡ್ಲೇರ ಕಮಲಾಕ್ಷಿ ಮಾಚಯ್ಯ , ಕಡ್ಲೇರ ದಿವ್ಯ ಮಾಚಯ್ಯ, ತಡಿಯಪ್ಪನ ಸುಬ್ಬಯ್ಯ ಕಾರ್ಯಪ್ಪ, ತಡಿಯಪ್ಪನ ಶಶಿ ಸುಬ್ಬಯ್ಯ, ತಡಿಯಪ್ಪನ ಪೂಜಾ ಸುಬ್ಬಯ್ಯ, ತಡಿಯಪ್ಪನ ಪ್ರಭು ಸುಬ್ಬಯ್ಯ, ಪೊಕ್ಕುಲಂಡ್ರ ಚಿತ್ರ ಚಿಣ್ಣಪ್ಪ, ಪೊಕ್ಕುಲಂಡ್ರ ಭಾನು ಚಿಣ್ಣಪ್ಪ, ಪೊಕ್ಕುಲಂಡ್ರ ಸೂರಜ್ ಚಿಣ್ಣಪ್ಪ, ಮಂದೋಡಿ ವಿಜು ದೇವಯ್ಯ, ತೆಕ್ಕಡೆ ಜಸ್ಮಿ ಜನಾರ್ಧನ

Ph :5213264 (080)

---

## ಮೂರನೇ ವರ್ಷದ ಪುಣ್ಯ ಸ್ಮರಣೆ

ದಿ|| ಪಟ್ಟಡ ನಂಜುಂಡ



ಜನನ : 20-3-1913 ಮರಣ : 4-8-1997

ನೀವು ನಮ್ಮನ್ನಗಲಿ ಮೂರು ವರ್ಷ ಸರಿದರೂ ನಿಮ್ಮ ಸವಿನೆನಪುಗಳು, ನೀವು ನೀಡಿದ ಮಾರ್ಗದರ್ಶನ ನಮಗೆ ದಾರಿದೀಪವಾಗಿದೆ. ನಿಮ್ಮ ಆತ್ಮಕ್ಕೆ ಸದಾ ಶಾಂತಿಯನ್ನು ಕರುಣಿಸಲಿ ಎಂದು ಕುಲದೈವ ವೆಂಕಟರಮಣನನ್ನು ಪ್ರಾರ್ಥಿಸುತ್ತಿರುವ,

ಪತ್ನಿ : ಪಟ್ಟಡ ಸೀತಮ್ಮ, ಮಗ : ಜಯರಾಮ್,
ಸೊಸೆ : ಪೂವಮ್ಮ, ಮತ್ತು ಮೊಮ್ಮಕ್ಕಳು
ಮೈಸೂರು.

---

## ಎರಡನೇ ವಾರ್ಷಿಕ ಪುಣ್ಯ ಸ್ಮರಣೆ



ದಿ|| ಪಾಣತ್ತಲೆ ಗಣಪತಿ ಸೋಮಪ್ಪ
ಜನನ : 16-9-1942, ಮರಣ : 14-8-1998

ನೀವು ನಮ್ಮನ್ನಗಲಿ 2ವರ್ಷ ಕಳೆದರು ಸದಾ ನಿಮ್ಮ ಸವಿನೆನಪು ನಮ್ಮೆಲ್ಲರ ಮನದಾಳದಲ್ಲಿ ಅಚ್ಚಳಿಯದೆ ಉಳಿದು ನಿತ್ಯವೂ ಪ್ರತಿ ಧ್ವನಿಸುತ್ತಿರುವ ನಿಮ್ಮ ಹಿತ ನುಡಿಗಳು ಅರಿವಾದಾಗಲೆಲ್ಲ ಕಣ್ಣಂಚಿನಲ್ಲಿ ಕಂಬನಿ ಮಿಡಿದು ನಿಮ್ಮ ಅಗಲಿಕೆಯ ನೋವನ್ನು ನೆನಪಿಸುತ್ತದೆ.

ನಿಮ್ಮ ಆತ್ಮಕ್ಕೆ ಸದಾ ಚಿರ ಶಾಂತಿಯನ್ನು ಕೋರುವ

ಪತ್ನಿ : ಕಮಲಾಕ್ಷಿ, ಮಕ್ಕಳು : ಕವಿತ, ಸವಿತ, ರೋಶನ್
ಅಳಿಯ : ಹರೀಶ್, ಹಾಗೂ ಬಂಧು ಬಳಗದವರು.

---

ಪ್ರಿಯ ಚಂದದಾರರಲ್ಲಿ ವಿನಂತಿ : ನಮ್ಮ ಪ್ರಿಯ ಚಂದದಾರರೇ ನಿಮ್ಮ ವಿಳಾಸವು ವರ್ಗಾವಣೆ ಮತ್ತೆ ಇತರ ಕಾರಣದಿಂದ ಬದ್ಲಾವಣೆ ಆಗಿದ್ದರೆ ದಯವಿಟ್ಟು ತಪ್ಪದೆ ಕೊಡಗ್ ಸಂಗಾತಿ ಕಛೇರಿಗೆ ತಿಳ್ಸಕ್ಕು. ಹಂಗನೇ ನವೀಕರಿಸಿ ಸಹಕರಿಸೋಕು ತ ಕೇಳಿಕಂಡವೆ.

— ಸಂಪಾದಕಿ



2000, ಆಗಸ್ಟ್ 1 ರಿಂದ 15 ರ ತನಕ

# ಒಳನೋಟ




| ಕನ್ನಡ ವಿಭಾಗ | ಲೇಖಕರು | ಪುಟಗಳು |
|---|---|---|
| ಭಾಗಮಂಡಲ ತಾಲ್ಲೋಕು ಸ್ಥಾಪನೆ ಅವಶ್ಯಕ | - ಸಂಪಾದಕೀಯ | 02 |
| ಮೆರಾಥಾನ್ ದಾಖಲೆಯ ವೀರ ಹೊಸೂರು ಕುಕ್ಕಪ್ಪ ಸೀತಾರಾಮ | - | 02 |
| ಸೋಲಿನ ಬೆನ್ನ ಹಿಂದೆಯೇ ಗೆಲುವನ್ನು ಕಂಡು ಕೊಡಗಿನ ಅಧಿಕಾರದ ಚುಕ್ಕಾಣಿ ಹಿಡಿದ ಶ್ರೀಮತಿ ಕೆ.ಪಿ. ಚಂದ್ರಕಲಾ ಪ್ರಸನ್ನ | - ತಡಿಯಪ್ಪನ ಕುಮಾರ ಜಯ | 03 |
| ಅಲ್ಪಸಂಖ್ಯಾತರು | - ಕುಂಭಗೌಡನ ರಂಜಿತ್ | 04 |
| ವ್ಯಕ್ತಿ ಸ್ವ ಪರಿಚಯ : ಮೇಜರ್ ಬಡ್ಡನ ಯಂ. ಚೆಂಗಪ್ಪ - ಸ್ವಾತಂತ್ರ್ಯಪೂರ್ವ ಮಿಲಿಟರಿ ಸರ್ವಿಸ್. | | 05 |
| ಸಂಗಾತಿ ಭವಿಷ್ಯ | - ಗಿರೀಶ್‌ಕುಮಾರ್ | 09 |
| ಕವನ ಕೊಡಗು ಸಂಗಾತಿ | - ಬಾರನ ವಂಶಿ ಬೋಪಯ್ಯ, ಐಗೂರು | 11 |
| ತಾಯ್ನಾಡಿಗಾಗಿ ತಮ್ಮನ್ನೇ ಅರ್ಪಿಸಿಕೊಂಡ ಕೊಡಗಿನ ಪುತ್ರರು | | 12 |
| ಶ್ರೀ ಲಕ್ಷ್ಮೀ ವೆಂಕಟೇಶ್ವರ ಮಹಾತ್ಮೆ | - ಮಳ್ಳಂದಿರ ಲಲಿತಾ ಶೇಷಗಿರಿ | 14 |
| ಸರ್ಪಗಂಧ - ಧಾರವಾಹಿ - 35 | - ಕೌಂಡಿನ್ಯ | 16 |
| ವಿದ್ಯಾವಂತ ನಿರದ್ಯೋಗಿಗಳಿಗೆ ಮಾರ್ಗದರ್ಶನ ಕೈಪಿಡಿ | - ತಡಿಯಪ್ಪನ ಕುಮಾರ ಜಯ | 17 |
| ಪತ್ರ ವಿಭಾಗ | - ಸಂಗಾತಿ ವರದಿ | 19 |
| ಕೊಡಗಿನಲ್ಲಿ "ಪನ್ಯ" ಜಮೀನು | - ಐ. ಕೆ. ಕುಶಾಲಪ್ಪ, ಗರ್ವಾಲೆ | 20 |
| **ಅರೆಭಾಷಿಕ ವಿಭಾಗ** | | |
| ವಾಂಟೆಡ್ ಮಿಸ್ಟರ್ ರಾಜು - ಧಾರಾವಾಹಿ - 14 | - ಶಂಕರನ ಬಸಪ್ಪ | 10 |
| ಹಳ್ಳಿ ಗಿಡಮದ್ದ್ | - ಮಂಞಂಡ್ರ ಗಣೇಶ್, | 19 |



| | |
|---|---|
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. **ಫೋನ್ : 0821/516771** |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/28047** |
|  ಸಂಗಾತಿ ಚಿಹ್ನೆ, ಹಸೆಮಣೆ ಪುಸ್ತಕ ಅರೆಭಾಷೆ ಕ್ಯಾಸೆಟ್/ಶುಭಾಶಯ ಕಾರ್ಡ್ಸ್ ಲಭ್ಯ | **ಪಾಂಡ್ಯನ್ ಕ್ಯಾಸೆಟ್ ಅಂಗಡಿ,** ಖಾಸಗಿ ಬಸ್ ನಿಲ್ದಾಣ, ಮಡಿಕೇರಿ **ಫೋನ್ :** 08272/29620 |
|  ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 **ಫೋನ್ :** 08276/73370 |
|  ಬೆಂಗಳೂರು ಮಹಾನಗರ | ಅಮ್ಮಾಜೀರ ಪೊನ್ನಪ್ಪ, 20, 1ನೇ ಮೈನ್, 4ನೇ ಕ್ರಾಸ್, ಸಾಕಮ್ಮ ಗಾರ್ಡನ್, ಬಸವನಗುಡಿ, ಬೆಂಗಳೂರು - 04, **ಫೋನ್ :**080/6342822 |
|  ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19,ಫೋನ್ : 080/6500946 |

 ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **6** ರೂ., ಅರ್ಧ ವಾರ್ಷಿಕ -75 ರೂ., ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಭಾಗಮಂಡಲ ತಾಲ್ಲೋಕು ಸ್ಥಾಪನೆ ಅವಶ್ಯಕ

ಶ್ರೀ ಕಾವೇರಿ ಉಗಮಸ್ಥಾನ ತಲಕಾವೇರಿಗೂ ಭಾಗಮಂಡಲಕ್ಕೂ ಹೆಚ್ಚಿನ ಸಂಬಂಧವಿದ್ದು ಭಾಗಮಂಡಲದ ಹೆಸರು ಪುರಾಣಗಳಲ್ಲೂ ಹಾಗೂ ಪ್ರಾಚೀನ ಇತಿಹಾಸದಲ್ಲೂ ಕಂಡು ಬಂದು ದಕ್ಷಿಣ ಭಾರತದ ಪುಣ್ಯಕ್ಷೇತ್ರಗಳಲ್ಲಿ ಅತೀ ಪುರಾತನವಾದದ್ದು ಹೌದು. ಆದರೆ ಇಷ್ಟೆಲ್ಲಾ ಪೌರಾಣಿಕ ಹಾಗೂ ಚಾರಿತ್ರಿಕ ಹಿನ್ನೆಲೆ ಇದ್ದರೂ ಭಾಗಮಂಡಲದ ಆರ್ಥಿಕ ಅಭಿವೃದ್ಧಿ ಕುಂಟುತ್ತಾ ಹೋಗುತ್ತಿದೆ. ಇದಕ್ಕೆ ಕಾರಣ ಇಲ್ಲಿ ಅತೀ ಹೆಚ್ಚು ಮಳೆ ಬರುವುದರಿಂದ ಮಣ್ಣಿನ ಸತ್ವ ದಿನದಿಂದ ದಿನಕ್ಕೆ ಕಡಿಮೆ ಯಾಗುತ್ತಾ ಹೋಗುತ್ತಿದೆ. ಒಂದಾನೊಂದು ಕಾಲದಲ್ಲಿ ಯಾಲಕ್ಕಿ ಬೆಳೆಗೆ ಹೆಸರಾದ ಈ ತಾವುನಾಡು ಯಾಲಕ್ಕಿ ಬೆಳೆಯೂ ಇಲ್ಲದೆ ಕೊಡಗಿನ ಇತರ ಸ್ಥಳಗಳಲ್ಲಿ ಬೆಳೆಯುವ ಕಾಫಿ ಬೆಳೆಯೂ ಸರಿಯಾದ ರೀತಿಯ ಫಸಲನ್ನು ಕೊಡದೆಯೂ, ಭತ್ತದ ಬೆಳೆಯೂ ಸಹ ಕೊಡಗಿನ ಇತರ ಕಡೆಗಳಷ್ಟು ಚೆನ್ನಾಗಿ ಬೆಳೆಯದೆ ಇರುವುದರಿಂದ ಭಾಗಮಂಡಲದ ಅಭಿವೃದ್ಧಿ ಕುಂಟಿತವಾಗಿದೆ. ನೈಸರ್ಗಿಕ ಸೌಂದರ್ಯವನ್ನು ಅನುಭವಿಸಲು ಬರುವ ಹಾಗೂ ಶ್ರೀ ಕಾವೇರಿ ಮಾತೆಯ ದರ್ಶನಕ್ಕಾಗಿ ಬರುವ ಹೊರದೇಶ ಹಾಗೂ ಹೊರನಾಡಿನ ಪ್ರೇಕ್ಷಕರಿಗೂ ಹಾಗೂ ಯಾತ್ರಿಕರಿಗೆ ಹಳೇ ಕಾಲದ ಕಟ್ಟಡಗಳಲ್ಲದೆ ನವೀನ ನಾಗರೀಕತೆಯಗನು ಗುಣವಾದ ಹೋಟೆಲುಗಳಾಗಲೀ, ಲಾಡ್ಜ್‌ಗಳಾಗಲೀ ಇಲ್ಲದಿದ್ದು ಹೊರಗಿನಿಂದ ಬಂದವರು ಭಾಗಮಂಡಲದಲ್ಲಿ ಉಳಿಯದೇ ಮಡಿಕೇರಿಗೆ ಹಿಂದಿರುಗುವ ಪ್ರಮೇಯವೇ ಹೆಚ್ಚು.

ಈ ರೀತಿಯಾಗಿ ಆರ್ಥಿಕವಾಗಿ ಹಿಂದುಳಿದಿರುವ ನಾಡನ್ನು ಉದ್ಧರಿಸುವುದಕ್ಕೆ ಈ ರೀತಿಯಾಗಿ ಹಿಂದುಳಿದಿರುವ ಪಶ್ಚಿಮ ಘಟ್ಟಕ್ಕೆ ಲಗತ್ತಾಗಿರುವ ಸಂಪಾಜೆ, ಚೆಂಬು, ಪೆರಾಜೆ, ಕರಿಕೆ, ಚೇರಂಗಾಲ, ತಾವೂರು, ತಣ್ಣಿಮಾನಿ, ಸಣ್ಣ ಪುಲಿಕೋಟು, ದೊಡ್ಡ ಪುಲಿಕೋಟು, ಐಯ್ಯಂಗೇರಿ, ನೆಲಜಿ, ಬಲ್ಲಮಾವಟಿ, ಚೆಯ್ಯಂಡಾಣೆ, ನಾಲಡಿ ಪೇರೂರು, ಮರಂದೋಡ, ನರಿಯಂದಡ, ಕಕ್ಕಬೆ, ಚೆಟ್ಟಿಮಾನಿ, ಪಾಕ, ಚೇರಂಬಾಣೆ, ಬಾಡಗ ಬೆಂಗೂರು, ಕಾರ್ಗುಂದ, ಬೆಟ್ಟತ್ತೂರು, ಅಮದೂರು, ಮದೆನಾಡು, ಕೊಯಿನಾಡು ಕಲ್ಲಾಳ ಗ್ರಾಮಗಳಿಂದ ಕೂಡಿದ ಹೊಸ ತಾಲ್ಲೋಕನ್ನು ರಚಿಸಿ ಇವುಗಳ ಅಭಿವೃದ್ಧಿಗೆ ಭಾಗಮಂಡಲಕ್ಕೆ ರಸ್ತೆ ಸಾರಿಗೆ ಸಂಪರ್ಕ ಕಲ್ಪಿಸಲು ಮಲೆನಾಡು ಅಭಿವೃದ್ಧಿಯ ಸಹಾಯವನ್ನು ಹಾಗೂ ಕರ್ನಾಟಕ ಸರ್ಕಾರದವರು ಈ ಹಿಂದುಳಿದ ಗ್ರಾಮಗಳ ಅಭಿವೃದ್ಧಿಗಾಗಿ ಪ್ರತ್ಯೇಕ ಅಭಿವೃದ್ಧಿ ಸಂಸ್ಥೆಯನ್ನು ಸ್ಥಾಪಿಸಿ. ಈ ಕ್ಷೇತ್ರದಲ್ಲಿ ಕಾಡಿನಲ್ಲಿ ಸಿಗುವ ಹಣ್ಣು ಹಂಪಲುಗಳಿಗೂ ಇತರ ವಾಣಿಜ್ಯ ಬೆಳೆಗಳನ್ನು ಹವಾಮಾನಕ್ಕನುಗುಣವಾಗಿ ಬೆಳೆಸಿ ಸಂಸ್ಕರಿಸಿ ನವೀನ ದಾಸ್ತಾನು ಮಳಿಗೆಗಳನ್ನು ತೆರೆದು ರೈತರು ಬೆಳೆಯುವ ವಸ್ತುಗಳನ್ನು ಸರಿಯಾದ ಕ್ರಯಕ್ಕೆ ಮಾರುವ ಏರ್ಪಾಡನ್ನು ಮಾಡಿ ಭಾಗಮಂಡಲದಲ್ಲಿ ಹೊಸ ತಾಲ್ಲೋಕು ಕಛೇರಿಯನ್ನು ತೆರೆಯುವ ಏರ್ಪಾಡಾದರೆ ಮಲೆನಾಡಿನ ಈ ಪ್ರದೇಶದ ಉದ್ಧಾರವಾಗಬಹುದೆಂದು ಸಂಗಾತಿಯ ಸಲಹೆ.

## ಮೆರಾಥಾನ್ ದಾಖಲೆಯ ವೀರ ಹೊಸೂರು ಕುಕ್ಕಪ್ಪ ಸೀತಾರಾಮ

ದಿನಾಂಕ 1-2-2000ದಿಂದ 15-2-2000ದ ಕೊಡಗು ಸಂಗಾತಿ ಸಂಚಿಕೆಯಲ್ಲಿ ಪ್ರಕಟಗೊಂಡ ಮೆರಾಥಾನ್ ವೀರ ಹೊಸೂರು ಕುಕ್ಕಪ್ಪ ಸೀತಾರಾಮನವರ ಮೆರಾಥಾನ್ ಓಟದ ಅಳಿಸಲಾಗಿರದ ಒಂದು ರಾಷ್ಟ್ರೀಯ ದಾಖಲೆಯನ್ನು ಪ್ರಕಟಿಸಲು ಕಾರಣಾಂತರದಿಂದ ಬಿಟ್ಟು ಹೋಗಿದ್ದಕ್ಕೆ ವಿಷಾದಿಸುತ್ತೇವೆ. ಶ್ರಿಯುತರು 1982ರ ಏಷ್ಯಾಡ್‌ನಲ್ಲಿ ಚಿನ್ನದ ಪದಕ ಗೆಲ್ಲುವ ಹೆಬ್ಬಯಕೆಯೊಂದಿಗೆ ಕಣಕ್ಕಿಳಿದು ದುರಾದೃಷ್ಟವಶಾತ್ ಕಂಚಿನ ಪದಕಕ್ಕೆ ತೃಪ್ತಿ ಪಡಬೇಕಾಗಿ ಬಂದಿದ್ದು ಶ್ರೀಯುತರಿಗೆ ಇಂದಿಗೂ ಬೇಸರದ ಸಂಗತಿಯಾಗಿದೆ. ಕಾರಣವೇನೆಂದರೆ ಏಷ್ಯಾಡ್ ಮೆರಾಥಾನ್ ಓಡಿದ ಅದೇ ಮೈದಾನದಲ್ಲಿ 27 ದಿನಗಳ ಮೊದಲು ಅಭ್ಯಾಸದಲ್ಲಿ ಇವರು ಓಡಿದ ಸಮಯ 2 ಗಂಟೆ 18 ನಿಮಿಷ 9 ಸೆಕೆಂಡುಗಳಾಗಿದ್ದು ಇದೇ ಮೆರಾಥಾನ್ ಫೈನಲ್‌ನಲ್ಲಿ ಮೊದಲಿಗರಾದವರು ಓಡಿದ ಸಮಯ 2 ಗಂಟೆ 22 ನಿಮಿಷ ಗಳಾಗಿರುತ್ತದೆ. ಅಂದರೆ ಇವರ ಅಭ್ಯಾಸದಲ್ಲಿ ಓಡಿದ ಸಮಯ ಕ್ಕಿಂತ 4 ನಿಮಿಷಗಳಷ್ಟು ಹೆಚ್ಚು ತೆಗೆದು ಕೊಂಡಿರುತ್ತಾರೆ. ಇದಕ್ಕೆ ಇವರ ಅನಾರೋಗ್ಯವೇ ಕಾರಣವು ಹೌದು. ಇವರ ಈ 2 ಗಂಟೆ 18 ನಿಮಿಷ 9 ಸೆಕೆಂಡ್ ಸಮಯ ಇಂದಿಗೂ ಅಳಿಸಲಾಗದ ರಾಷ್ಟ್ರೀಯ ದಾಖಲೆಯಾಗಿದ್ದು, 18 ವರ್ಷಗಳಷ್ಟು ಹಳೆಯ ದಾಗಿರುತ್ತದೆ. ಇಂದಿಗೂ ಇದು ದಾಖಲೆಯಾಗಿ ಉಳಿದು ಕೊಂಡಿದ್ದು ಇದು ನಮ್ಮ ಜನಾಂಗಕ್ಕೆ, ಜಿಲ್ಲೆಗೆ ಹಾಗೂ ರಾಜ್ಯಕ್ಕೆ ಹೆಮ್ಮೆಯ ವಿಷಯವಾಗಿರುತ್ತದೆ.

### ವಿಚಿತ್ರ ಸತ್ಯ

ಸುಪ್ರಸಿದ್ಧ ತತ್ವಜ್ಞಾನಿ ಅರಿಸ್ಟಾಟಲ್ ಬಹಳ ನಿದ್ದೆ ಮಾಡುತ್ತಿದ್ದನಂತೆ ಹಾಗಾಗಿ ಅವನಿಗೆ ಅಭ್ಯಾಸ ಮಾಡುವುದು ಕಷ್ಟದ ಕೆಲಸವಾಗಿತ್ತಂತೆ. ಅದಕ್ಕಾಗಿ ಅವನು ಒಂದು ಉಪಾಯ ಮಾಡಿದನಂತೆ. ಒಂದು ಕೈಯಲ್ಲಿ ತಟ್ಟೆ ಇನ್ನೊಂದು ಕೈಯಲ್ಲಿ ಪುಸ್ತಕ ಹಿಡಿದು ಅಭ್ಯಾಸ ಮಾಡತೊಡಗಿದನಂತೆ. ನಿದ್ರೆ ಬಂದು ತಲೆತೂಗಿ ಹೋದರೆ ತಟ್ಟೆ ಕೆಳಗೆ ಬಿದ್ದು ಶಬ್ದವಾದಾಗ ಅವನಿಗೂ ತಕ್ಷಣ ಎಚ್ಚರವಾಗುತ್ತಿತ್ತಂತೆ

ಸಂಗ್ರಹ : ಮಿಥುನ್ ಗೋಪಾಲ್ ಯುವಕ ಪಾಡಿ

ನಮ್ಮೂರಿನಲ್ಲಿದ್ದಾಳೆ ಕುಂತಿ, ಅವಳು ಬೆಳೆಸುತ್ತಾಳೆ ಶುಂಠಿ

# ಸೋಲಿನ ಬೆನ್ನ ಹಿಂದೆಯೇ ಗೆಲುವನ್ನು ಕಂಡು ಕೊಡಗಿನ ಅಧಿಕಾರದ ಚುಕ್ಕಾಣಿ ಹಿಡಿದ ಶ್ರೀಮತಿ ಕೆ.ಪಿ. ಚಂದ್ರಕಲಾ ಪ್ರಸನ್ನ



ಸೋಲು ಗೆಲುವಿನ ಲಕ್ಷಣ ಎಂಬುದು ನಿಜಕ್ಕೂ ಸತ್ಯ. ಈ ನಾಣ್ಣುಡಿ ಶತಮಾನಗಳಿಂದ ವಾಡಿಕೆಯಾಗಿಯೂ ಅನುಭವದಲ್ಲಿಯೂ ಜನರು ಕಂಡು ಕೊಂಡಿದ್ದಾರೆ. ಒಂದು ಸಾರಿ ಸೋತರೆ ಸೋತವರಿಗೆ ಈ ಮಾತನ್ನು ಹೇಳಿ ಧೈರ್ಯ ತುಂಬುವುದು ಇಂದಿಗೂ ನಡೆಯುತ್ತಿದೆ. ಕಳೆದ ವರ್ಷ ಅಂದರೆ 1999ನೇ ಸೆಪ್ಟೆಂಬರ್ ತಿಂಗಳ ವಿಧಾನ ಸಭೆಯ ಚುನಾವಣೆಯಲ್ಲಿ ಸೋತು ಧೈರ್ಯಗೆಡದೆ 2000ದ ಜೂನ್ ತಿಂಗಳಲ್ಲಿ ನಡೆದ ಜಿಲ್ಲಾ ಪಂಚಾಯತ್ ಚುನಾವಣೆಯಲ್ಲಿ ಜಯಭೇರಿ ಭಾರಿಸಿ ಇಂದು ವಿಶಿಷ್ಟ ಸಂಸ್ಕೃತಿಯ ತವರೂರಾದ ಕೊಡಗಿನ ಜಿಲ್ಲಾ ಪಂಚಾಯತ್ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿ ಮೆರೆಯುತ್ತಿರುವ ಧೀರ ದಿಟ್ಟ ಮಹಿಳೆ ಈ ನಮ್ಮ ಕೆ.ಪಿ. ಚಂದ್ರಕಲಾ ರವರು ಈ ನಾಣ್ಣುಡಿಗೆ ಜ್ವಲಂತ ನಿದರ್ಶನ.

ಶ್ರೀಯುತರು 1999ರ ಸೆಪ್ಟಂಬರ್ ತಿಂಗಳಲ್ಲಿ ನಡೆದ ವಿಧಾನ ಸಭೆಯ ಚುನಾವಣೆಯಲ್ಲಿ ಬಿ.ಜೆ.ಪಿ. ಅಭ್ಯರ್ಥಿಯಿಂದ ಸೋಲನ್ನು ಅನುಭವಿಸಿ ದೃತಿಗೆಡದೆ, ಜನ ಸಂಘಟನೆಯಲ್ಲಿ ತೊಡಗಿಸಿಕೊಂಡು ಮುಂದೆ ಎದುರಾಗುವ ಜಿಲ್ಲಾ ಪಂಚಾಯತ್ ಚುನಾವಣೆಗೆ ಹೆಬ್ಬಾಲೆ ಕ್ಷೇತ್ರದಿಂದ ಸಜ್ಜಾಗಿ ಕಾಂಗ್ರೆಸ್ಸ್ ಪಕ್ಷದಿಂದ ಸ್ಪರ್ಧೆಗೆ ಇಳಿದರು. ಇವರಿಗೆ ಎದುರಾಗಿ ಆಗ ಜಿಲ್ಲಾ ಪಂಚಾಯತ್ ಸದಸ್ಯರಾಗಿದ್ದು, ಮಾಜಿ ಜಿಲ್ಲಾ ಪಂಚಾಯತ್ ಉಪಾಧ್ಯಕ್ಷರೂ ಆಗಿದ್ದ ಕಮಲ ಗಣಪತಿಯವರು ಇದ್ದರು. ಈ ಪ್ರಭಾವಿ ಪೈಪೋಟಿಯಲ್ಲಿ ಸ್ಪರ್ಧಿಸಿ ಕೊನೆಗೆ ಬಿ.ಜೆ.ಪಿ. ಅಭ್ಯರ್ಥಿ ಗಂಗಮ್ಮ ಯೋಗೇಶ್‌ಗಿಂತ 1836 ಮತಗಳ ಭಾರಿ ಅಂತರದಿಂದ ಜಯ ಗಳಿಸಿ ಕೊಡಗು ಜಿಲ್ಲಾ ಪಂಚಾಯತಿಗೆ ಮರು ಪ್ರಶ್ನಿಸುವಂತಿಲ್ಲದೆ ಆಯ್ಕೆಯಾದರು. ಜಿಲ್ಲಾ ಪಂಚಾಯತಿಗೆ ಆಯ್ಕೆಯಾದಲಿಂದ ಸುದ್ದಿಯಲ್ಲೇ ಇದ್ದ ಚಂದ್ರಕಲಾ ಮುಂದೆ ಸರಕಾರದ ಮೀಸಲಾತಿಗಾಗಿ ಎದುರು ನೋಡುತ್ತಿದ್ದರು. ಕೊನೆಗೆ ಸರಕಾರದ ಮೀಸಲಾತಿ ಒಂದೇ ಇವರೀಗ ಪ್ರಬಲ ಅದೃಷ್ಟವಾಗಿ ಪರಿಣಮಿಸಿತು. ಆದರೂ ಆಯ್ಕೆ ಅಷ್ಟು ಸಲೀಸಾಗಿ ಇಲ್ಲದಿದ್ದರೂ ಇಲ್ಲಿಯೂ ಇವರಿಗೆ ಪ್ರಬಲ ಪ್ರತಿಸ್ಪರ್ಧಿಯಾದ ಮಹಿಳೆ ಶ್ರೀಮತಿ ವೀಣಾ ಅಚ್ಚಯ್ಯ ಎದುರಾಗಿದ್ದು. ಸಾಮಾನ್ಯವಾಗಿ ವಿರೋಧ ಪಕ್ಷದವರಿಂದ ಚುನಾವಣೆ ಸ್ಪರ್ಧೆಯಾದರೆ, ಇಲ್ಲಿ ಕಾಂಗ್ರೆಸ್ ಪಕ್ಷದಿಂದ ಆಯ್ಕೆ ಯಾದವರಿಂದಲೇ ಅಧ್ಯಕ್ಷ ಪದವಿಗೆ ಟಗ್ ಆಫ್ ವಾರ್ ಎದುರಾಗಿ ಕೊಡಗಿನ ಆಡಳಿತದ ಚುಕ್ಕಾಣಿ ಹಿಡಿಯುವುದರಲ್ಲಿ ಸಫಲರಾದರು. ಈ ಸಫಲತೆಗೆ ಇನ್ನೊಂದು ಕಾರಣವೇನೆಂದರೆ ಕಾಂಗ್ರೆಸ್ ಸರಕಾರದಲ್ಲಿ ಸೋಮವಾರಪೇಟೆಯನ್ನು ವಿಧಾನ ಸಭೆಯಲ್ಲಿ ಪ್ರತಿನಿಧಿಸಲು ಯಾರೊಬ್ಬರು ಇಲ್ಲದ್ದರಿಂದ ಕೊಡಗಿನಲ್ಲಿ ಇರುವ ಮೂರು ಮಂತ್ರಿಗಳು ಬೇರೆ ತಾಲೋಕಿನವ ರಾದ್ದರಿಂದ ಜಿಲ್ಲಾ ಪಂಚಾಯತ್ ಅಧ್ಯಕ್ಷಗಿರಿಯನ್ನಾದರೂ ಸೋಮವಾರ ಪೇಟೆ ತಾಲ್ಲೂಕಿಗೆ ಬಿಟ್ಟುಕೊಡಬೇಕೆಂಬ ಉದ್ದೇಶ ವೀಕ್ಷಕರಲ್ಲಿ ಮೂಡಿದ್ದರಿಂದ ಇವರಿಗೆ ಇದು ಒಂದು ವರದಾನವಾಯಿತು. ಅದೃಷ್ಟ ಒಂದಿದ್ದರೆ ಅವಕಾಶಗಳು ತಾನಾಗಿಯೇ ಒದಗಿ ಬರುತ್ತವೆ ಎಂಬುದಕ್ಕೆ ಚಂದ್ರಕಲಾರವರೇ ಸಾಕ್ಷಿ. ಈ ಹಿಂದೆ ಅಮೆ ಕಮಲಾ ಗಣಪತಿಯವರು ಜಿಲ್ಲಾ ಪಂಚಾಯತ್ ಸದಸ್ಯರಾಗಿದ್ದರೂ ಅವರಿಗೆ ಜಿಲ್ಲಾ ಪಂಚಾಯತ್ ಅಧ್ಯಕ್ಷರಾಗುವ ಅದೃಷ್ಟ ದೇವರು ಕರುಣಿಸದೆ ಬರೇ ಉಪಾಧ್ಯಕ್ಷ ಪದವಿಗೆ ತೃಪ್ತಿ ಪಡಬೇಕಾಗಿ ಬಂದದ್ದು ದುರಾದೃಷ್ಟ.

ಶ್ರೀಮತಿ ಚಂದ್ರಕಲಾರವರ ತಂದೆ ಪೂವಯ್ಯನವರು ಸೋಮವಾರ ಪೇಟೆ ಸಮೀಪದ ಕಾರೆಕೊಪ್ಪ ಗ್ರಾಮದವರು. ಇವರು ತಮ್ಮ ವಿದ್ಯಾಭ್ಯಾಸವನ್ನು ಸಕಲೇಶಪುರದಲ್ಲಿ, ಹೈಸ್ಕೂಲ್ ವಿದ್ಯಾಭ್ಯಾಸವನ್ನು ಮುಗಿಸಿ ಹಾಸನದಲ್ಲಿ ಪದವಿ ಪಡೆದು, ಮೈಸೂರು ವಿಶ್ವ ವಿದ್ಯಾನಿಲಯದ ಸಮಾಜ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಇವರಿಗೆ ಮನೋಹರಿ, ಸತ್ಯಭಾಮ, ರತ್ನಕುಮಾರಿ ಎಂಬ ಮೂರು ಅಕ್ಕಂದಿರು ಹಾಗೂ ಒಬ್ಬಳು ತಂಗಿ ಶೈಲಜಾ ಇರುವರು. ಒಬ್ಬ ಅಣ್ಣ ಕನ್ನಡ ಚಿತ್ರರಂಗದ ನಟ ಜೈಜಗದೀಶ್ ರವರಾಗಿದ್ದರೆ, ಇನ್ನೊಬ್ಬ ತಮ್ಮ ಪ್ರವೀಣ್ ಸಹ ಇರುವರು.

ಚಂದ್ರಕಲಾರವರ ಪತಿ ಶ್ರೀ ಪ್ರಸನ್ನಚಂದ್ರರವರು ರಾಷ್ಟ್ರಕವಿ ಕುವೆಂಪು ಅವರ ಸಹೋದರ ಮಾನಪ್ಪನವರ ಮಗನಾಗಿದ್ದಾರೆ, ಮಾನಪ್ಪನವರು ಹಿಂದಿ, ಪಂಡಿತರಲ್ಲದೆ ಸಾಹಿತ್ಯ, ಪುಸ್ತಕಗಳನ್ನು ಬರೆದಿರುತ್ತಾರೆ. ಪ್ರಸನ್ನಚಂದ್ರರವರು ಸ್ನಾತಕ್ಕೋತ್ತರ ಪದವೀಧರರೂ ಅಲ್ಲದೆ ಕಾಫಿ ತೋಟದ ಮಾಲೀಕರೂ ಹೌದು. ಈ ದಂಪತಿಗಳ ಒಬ್ಬಳೇ ಮಗಳು ಶ್ರೀ ಗೌರಿ ಪದವಿಯಲ್ಲಿ ಓದು ತ್ತಿದ್ದಾಳೆ. ಇವರೀಗ ಕುಶಾಲನಗರದ ಗುಮ್ಮನ ಕೊಲ್ಲಿ ನಿವಾಸಿಗಳು.

ಜಿಲ್ಲಾ ಪರಿಷತ್ ಪ್ರಥಮ ಬಾರಿಗೆ ಅಸ್ತಿತ್ವಕ್ಕೆ ಬಂದಾಗ ಕುಶಾಲನಗರ ಕ್ಷೇತ್ರದಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿ ಆಯ್ಕೆಯಾಗಿದ್ದರು. ಈ ಭಾರಿ ಹೆಬ್ಬಾಲೆ ಕ್ಷೇತ್ರದಿಂದ ಆರಿಸಿ ಬಂದು ಕೊಡಗು ಜಿಲ್ಲಾ ಪಂಚಾಯಿತಿಯ 5ನೇ ಅಧ್ಯಕ್ಷರು ಹಾಗೂ 2ನೇ ಮಹಿಳಾ ಅಧ್ಯಕ್ಷರೂ ಆಗಿರುತ್ತಾರೆ.

– ತಡಿಯಪ್ಪನ ಕುಮಾರ ಜಯ

# ಅಲ್ಪಸಂಖ್ಯಾತರು

ಪ್ರಪಂಚದಲ್ಲಿ ಅನೇಕ ದೇಶಗಳಿವೆ. ಪ್ರತಿಯೊಂದು ರಾಷ್ಟ್ರದ ಎಲ್ಲ ಜನ ಒಂದೇ ಬುಡಕಟ್ಟಿಗೆ ಸೇರಿದವರಲ್ಲ. ಜಾತಿ, ಧರ್ಮ, ಭಾಷೆ, ಬಣ್ಣ ಈ ವಿಷಯಗಳಲ್ಲಿ ಅವರು ಬೇರೆ ಬೇರೆಯವರು ಒಂದು ದೇಶದಲ್ಲಿ ಕಡಿಮೆ ಅನುಯಾಯಿಗಳನ್ನು ಹೊಂದಿರುವವರು ಮತದ ದೃಷ್ಟಿಯಿಂದ ಅಲ್ಪಸಂಖ್ಯಾತರು. ಯಾವ ಭಾಷೆಯನ್ನಾಡುವವರು ಅಧಿಕಸಂಖ್ಯೆಯಲ್ಲಿರುವರೊ ಅವರು ಭಾಷೆಯ ದೃಷ್ಟಿಯಿಂದ ಬಹು ಸಂಖ್ಯಾತರು. ಉಳಿದ ಭಾಷೆಗಳನ್ನಾಡುವರು ಅಲ್ಪಸಂಖ್ಯಾತರು. ಹೀಗೆ ಒಂದು ದೇಶದಲ್ಲಿ ಹಲವು ಬಗೆಯ ಅಲ್ಪಸಂಖ್ಯಾತರು ಇರಬಹುದು.

ಅಮೇರಿಕ ಜನಸಂಖ್ಯೆಯಲ್ಲಿ ಸುಮಾರು ಶೇಕಡಾ 11ರಷ್ಟು ಇರುವ ನೀಗ್ರೊಗಳು ಕುಲಕ್ಕೆ ಸಂಬಂಧಿಸಿ ಅಲ್ಪಸಂಖ್ಯಾತರು. ಧರ್ಮದ ಕಾರಣಕ್ಕಾಗಿ ಭಾರತದಲ್ಲಿ ಮುಸಲ್ಮಾನರು, ಕ್ರಿಶ್ಚಿಯನ್ನರು, ಅಲ್ಪಸಂಖ್ಯಾತರು. ಭಾಷೆಯ ಕಾರಣದಿಂದ ಭಾರತದ ನಾನಾ ರಾಜ್ಯಗಳಲ್ಲಿ, ರಾಜ್ಯದ ಭಾಷೆಯನ್ನಲ್ಲದೆ ಬೇರೆ ಭಾಷೆ ಮಾತನಾಡುವವರು ಅಲ್ಪಸಂಖ್ಯಾತರು.

ಅನೇಕ ರಾಷ್ಟ್ರಗಳಲ್ಲಿ ಈ ಅಲ್ಪಸಂಖ್ಯಾತರ ಸಮಸ್ಯೆಗಳನ್ನು ಸಹಕಾರ ಮತ್ತು ಸಹನೆಯಿಂದ ನಿವಾರಿಸಲಾಗುತ್ತಿದೆ. ಅನೇಕ ಭಾಷಾಗುಂಪುಗಳು ಒಂದು ಕಡೆ ನೆಲೆಸಿ. ಶಾಂತಿಯಿಂದ ಒಂದೇ ಸರಕಾರದ ನೆರಳಿನಲ್ಲಿ ಅಭಿವೃದ್ಧಿ ಹೊಂದುತ್ತಿರುವ ಸ್ವಿಟ್ಜರ್‌ಲೆಂಡ್ ಇದಕ್ಕೊಂದು ಶ್ರೇಷ್ಠ ಉದಾಹರಣೆ ಭಾರತ ಸಹ ಈ ಹಾದಿಯಲ್ಲಿ ಮುನ್ನಡೆಯುತ್ತಿದೆ.

ಅನೇಕ ವೇಳೆ ಈ ಅಲ್ಪಸಂಖ್ಯಾತರು ಬಹು ಸುಲಭವಾಗಿ ಬಹುಸಂಖ್ಯಾತರಲ್ಲಿ ಒಂದಾಗುತ್ತಾರೆ. ಇದರಿಂದ ಅಲ್ಲಿ ಯಾವ ಭೇದಭಾವಕ್ಕೂ ಆಸ್ಪದವಿರುವುದಿಲ್ಲ. ಕೆಲವೊಮ್ಮೆ ಈ ಅಲ್ಪ ಸಂಖ್ಯಾತರು ರಾಷ್ಟ್ರಗಳ ವಿಭಜನೆಗೂ ಕಾರಣವಾಗಿದ್ದಾರೆ. ಉದಾಹರಣೆಗೆ ಭಾರತದ ಮುಸಲ್ಮಾನ ಅಲ್ಪಸಂಖ್ಯಾತರು ಒಂದು ಭಾಗದವರು ಬಹುಸಂಖ್ಯಾತರಾದ ಹಿಂದೂಗಳನ್ನು ಅನುಮಾನ ದೃಷ್ಟಿಯಿಂದ ನೋಡಿ, ಭಾರತದ ವಿಭಜನೆಗೆ, ಪಾಕಿಸ್ತಾನದ ಸ್ಥಾಪನೆಗೆ ಕಾರಣರಾದರು.

ಕೆಲವು ಸಲ ಈ ಅಲ್ಪಸಂಖ್ಯಾತರಿಂದ ರಾಷ್ಟ್ರದ ಶಾಂತಿಗೆ ಕುಂದು ಉಂಟಾಗಬಹುದು. ಇದರ ನಿವಾರಣೆಗಾಗಿ ನೆರೆ ರಾಷ್ಟ್ರಗಳು ತಮ್ಮ ತಮ್ಮ ಅಲ್ಪಸಂಖ್ಯಾತರನ್ನು ವಿನಿಮಯ ಮಾಡಿಕೊಂಡಿದೆ ಈ ರೀತಿಯ ವಿನಿಮಯ ಗ್ರೀಸ್ ಮತ್ತು ತುರ್ಕಿಯ ನಡುವೆ ನಡೆದಿವೆ.

1948ರಲ್ಲಿ ವಿಶ್ವಸಂಸ್ಥೆ ಮಾನವ ಕಲ್ಯಾಣಕ್ಕಾಗಿ ಮಾನವ ಹಕ್ಕುಗಳನ್ನು ಘೋಷಿಸಿತು. ಯಾವ ಭೇದ ಭಾವವೂ ಇಲ್ಲದೆ ಪ್ರತಿ ಮನುಷ್ಯನಿಗೂ ಕೆಲ ಹಕ್ಕುಗಳು ಇರಬೇಕು ಎಂದಿತು.

ಕೆಲವು ಅಲ್ಪಸಂಖ್ಯಾತರ ಪಂಗಡಗಳು ತಮ್ಮದೇ ಆದ ಧರ್ಮ ಸಂಪ್ರದಾಯ, ಅಥವಾ ತಮ್ಮದೇ ಭಾಷೆಯಲ್ಲಿ ವಿದ್ಯೆ ಕಲಿಯಲು ಇಚ್ಛಿಸಿ ರಕ್ಷಣೆ ಕೇಳಬಹುದು. ಈ ಎಲ್ಲವನ್ನೂ ದೃಷ್ಟಿಯಲ್ಲಿಟ್ಟು ಕೊಂಡ ಭಾರತದ ಸಂವಿಧಾನ ಅಲ್ಪಸಂಖ್ಯಾತರ ಹಿತರಕ್ಷಣೆಗಾಗಿ ಕೆಲವು ಅಧಿಕಾರಗಳನ್ನು ಕೊಟ್ಟಿದೆ. ಅವುಗಳ ಪ್ರಕಾರ

1. ಭಾರತದಲ್ಲಿ ವಾಸವಾಗಿರುವ ನಾಗರೀಕರ ಯಾವುದೊಂದು ವಿಭಾಗದವರು ತಮ್ಮದೇ ಆದ ಯಾವುದಾದರೊಂದು ವಿಶಿಷ್ಟ ಭಾಷೆಯನ್ನು ಲಿಪಿಯನ್ನು ಅಥವಾ ಸಂಸ್ಕೃತಿಯನ್ನು ಪಡೆದಿದ್ದರೆ, ಅವರು ಅವುಗಳನ್ನುಳಿಸಿ ಕಾಪಾಡಿಕೊಂಡು ಬರುವ ಅಧಿಕಾರವನ್ನು ಹೊಂದಿರತಕ್ಕದ್ದು

2. ರಾಜ್ಯಪೋಷಿತವಾದ ಅಥವಾ ರಾಜ್ಯನಿಧಿಯಿಂದ ಸಹಾಯ ದ್ರವ್ಯವನ್ನು ಪಡೆಯುತ್ತಿರುವ ಯಾವುದೇ ವಿದ್ಯಾಸಂಸ್ಥೆಗೆ ಯಾವನೊಬ್ಬ ನಾಗರೀಕನಿಗೂ ಕೇವಲ ಧರ್ಮ, ಮೂಲ ವಂಶ, ಜಾತಿ, ಭಾಷೆ ಅಥವಾ ಇವುಗಳಲ್ಲಿ ಯಾವುದಾದರೊಂದರ ಆಧಾರದ ಮೇಲೆ ಮಾತ್ರವೇ ಪ್ರವೇಶ ನಿರಾಕರಿಸ ತಕ್ಕುದಲ್ಲ.

3. ಧರ್ಮ ಅಥವಾ ಭಾಷೆಯ ಆಧಾರದ ಮೇಲೆ ಏರ್ಪಟ್ಟಿರುವ ಎಲ್ಲ ಅಲ್ಪಸಂಖ್ಯಾತ ವರ್ಗಗಳಿಗೂ ತಮ್ಮ ಇಷ್ಟಕ್ಕನುಸಾರವಾದ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳ ಆಡಳಿತವನ್ನು ನಡೆಸಲು ಅಧಿಕಾರವಿರ ತಕ್ಕದ್ದು.

ವಿದ್ಯಾಸಂಸ್ಥೆಗಳಿಗೆ ಸಹಾಯವನ್ನೊದಗಿಸುವುದರಲ್ಲಿ, ರಾಜ್ಯವು ಯಾವುದೇ ವಿದ್ಯಾಸಂಸ್ಥೆಯ ವಿಷಯದಲ್ಲಿ, ಅದು ಧರ್ಮ ಅಥವಾ ಭಾಷೆಯ ಆಧಾರದ ಮೇಲೆ ಏರ್ಪಟ್ಟಿದೆಯೆಂಬ, ಅಲ್ಪಸಂಖ್ಯಾತರ ಆಡಳಿತದಲ್ಲಿದೆಯೆಂಬ ಕಾರಣದ ಮೇಲೆ ತಾರತಮ್ಯ ಮಾಡತಕ್ಕದ್ದಲ್ಲ..

ಇಂಥ ರಕ್ಷಣೆ ದೊರೆಯುವುದರಿಂದ ಅಲ್ಪಸಂಖ್ಯಾತರು ನೆಮ್ಮದಿಯಿಂದ ಬಾಳ್ವೆ ನಡೆಸುವುದು ಸಾಧ್ಯವಾಗುತ್ತದೆ.

ಆಕರ : ಜ್ಞಾನ ಗಂಗೋತ್ರಿ

ಕುಂಭಗೌಡನ ರಂಜಿತ್, ಮಕ್ಕಂದೂರು.

---

## ನಿಮಗಿದು ತಿಳಿದಿರಲಿ

ಭಾರತದ ಮೊದಲನೆ ಬ್ರಿಟಿಷ್ ಗವ್ಹರ್ನರ್ ಜನರಲ್
— ವಾರನ್ ಹೇಸ್ಟಿಂಗ್ಸ್

ಭಾರತದ ಪ್ರಥಮ ಹಾಗೂ ಅಂತಿಮ ಭಾರತೀಯ ಗವ್ಹರ್ನರ್ ಜನರಲ್
— ರಾಜಗೋಪಾಲಾಚಾರಿ

ಸ್ವತಂತ್ರ್ಯ ಭಾರತದ ಪ್ರಥಮ ಕಮಾಂಡರ್ ಜನರಲ್
— ಫೀಲ್ಡ್ ಮಾರ್ಷಲ್ ಕಾರ್ಯಪ್ಪ

ಭಾರತ ಗಣರಾಜ್ಯದ ಪ್ರಥಮ ರಾಷ್ಟ್ರಪತಿ
— ಡಾ. ರಾಜೇಂದ್ರ ಪ್ರಸಾದ್

ಸಂಗ್ರಹ — ಬಾರಿಕೆ ಅಶ್ವಿನಿ ನಾಣಯ್ಯ
ಮರಂದೋಡ.

---

# ವ್ಯಕ್ತಿ ಸ್ವ ಪರಿಚಯ : ಮೇಜರ್ ಬಡ್ಡನ ಯಂ. ಚೆಂಗಪ್ಪ - ಸ್ವಾತಂತ್ರ್ಯಪೂರ್ವ ಮಿಲಿಟರಿ ಸರ್ವಿಸ್.



ಸೈನ್ಯದಲ್ಲಿ ನನ್ನ ಜೀವನ ಯಾತ್ರೆಯ ಪರಿಚಯ : ನನ್ನ ಜೀವನ ಯಾತ್ರೆಯು ನಂ. 14 ನೇ ಕೂರ್ಗ್ ಬೆಟಾಲಿಯನ್ I.T.F. ನಿಂದ ಪ್ರಾರಂಭವಾಯಿತು.

1834 ರಲ್ಲಿ ಬ್ರಿಟೀಷರು ಲೆಫ್ಟಿನೆಂಟ್ ಕರ್ನಲ್ ಜಿ.ಎಫ್. ಫ್ರೇಜರ್ ರವರ ನಾಯಕತ್ವದಲ್ಲಿ ಕೊಡಗನ್ನು ಆಕ್ರಮಿಸಿಕೊಂಡಾಗ ಈ ವಿಜಯದ ಗೌರವಾರ್ಥವಾಗಿ ಬ್ರಿಟೀಷ್ ಸರ್ಕಾರವು ಹೈದರಾಲಿ ಹಾಕಿದ ಕುಶಲನಗರ ಎಂಬ ಹೆಸರನ್ನು ಬದಲು ಮಾಡಿ ಫ್ರೇಜರ್ ಪೇಟೆ ಎಂದು ಬದಲಾಯಿಸಿತು. ಅಲ್ಲದೆ ಆಗಿದ್ದ ಕೊಡಗು ರಾಜನ ಸೈನ್ಯವನ್ನು ಒಡೆದು ಹಾಕಿ ದೇಶದ ರಕ್ಷಣೆಗೆ ಪ್ರತ್ಯೇಕ ಸೈನ್ಯ ಸ್ಥಾಪನೆ ಮಾಡಲಿಲ್ಲ. ಆದುದರಿಂದ ಕೊಡಗಿನ ಯುವಕರು ಕೊಡವ ಮತ್ತು ಗೌಡರುಗಳು ನೆರೆ ಪ್ರಾಂತ್ಯಗಳಿಗೆ ಹೋಗಿ ಸೈನ್ಯಕ್ಕೆ ಸೇರಲು ಆರಂಭಿಸಿದರು. ಹೀಗೆ ಸೇರಿದ ಒಂದು ಕರ್ನಾಟಕ ಬೆಟಾಲಿಯನ್ 1914-18 ರ ಮೊದಲನೆಯ ವಿಶ್ವ ಯುದ್ಧದಲ್ಲಿ ಮಧ್ಯ ಏಷ್ಯಕ್ಕೆ ಹೋಗಿ ಯುದ್ಧದಲ್ಲಿ ಭಾಗವಹಿಸಿತ್ತು. ಯುದ್ಧ ಮುಗಿದ ನಂತರ ಇದನ್ನು ಒಡೆದು ಹಾಕಿದರು. ನಂತರ ಮನೆಗೆ ಹೋಗಲು ಇಷ್ಟ ಪಡದವರನ್ನು ಆಗ ಕಣ್ಣಾನೂರಿನಲ್ಲಿದ್ದ ಮಲಬಾರ್ ಬೆಟಾಲಿಯನ್ ಐ.ಟಿ.ಎಫ್‌ಗೆ ವರ್ಗಾ ಮಾಡಿದರು. ಇದಕ್ಕೆ ಕೊಡಗಿನವರು ಇಷ್ಟ ಪಡಲಿಲ್ಲ. ಹಾಗಾಗಿ ಕೊಡಗಿನ ಮುಖಂಡರು 1922 ರಲ್ಲಿ ಬ್ರಿಟೀಷ್ ಸರ್ಕಾರದ ಕಾರ್ಯಕರ್ತ (ಕಮಿಷನರ್) ರಿಗೆ ಮನವಿ ಮಾಡಿ ತಮಗೆ ಬೇರೆ ಬೆಟಾಲಿಯನ್ ಬೇಕೆಂದು ಕೇಳಿ ಕೊಂಡ ಮೇಲೆ 2 ಕಂಪನಿಗಳು ಸೇರಿದ 14 ಕೂರ್ಗ್ ಬೆಟಾಲಿಯನ್ ಐ.ಟಿ.ಎಫ್‌ನ್ನು ಮಡಿಕೇರಿಯಲ್ಲಿ ಸ್ಥಾಪನೆ ಮಾಡಲು ಅನುಮತಿ ಸಿಕ್ಕಿತ್ತು. ಇದಕ್ಕೆ ಗೌಡ ಜನಾಂಗದ ತುಂಬಾ ಯುವಕರು ಸೇರುತ್ತಿದ್ದುದನ್ನು ನೋಡಿ 1932 ರಲ್ಲಿ ನಮ್ಮ ಜನಾಂಗದ ಮುಖಂಡರು ಮುಖ್ಯವಾಗಿ ದಿವಂಗತರಾದ ಶ್ರೀ ಯನ್.ಎಮ್. ಮುದ್ದಪ್ಪನವರು, ಸೈನ್ಯದ ಹಿರಿಯ ವಿ.ಸಿ.ಓ. ವೈಸರಾಯ ಕಮಿಷನ್ ಆಫೀಸರ್‌ರಾದ ಯಸ್.ಪಿ. ರಾಮಪ್ಪ ಮತ್ತು ಇತರ ಮುಖಂಡರು ಸೇರಿ ಈ ಬೆಟಾಲಿಯನ್‌ನಲ್ಲಿ ಗೌಡರುಗಳಿಗೆ ಒಂದು ಕಂಪನಿ ಬೇಕೆಂದು ಮನವಿ ಮಾಡಿಕೊಂಡ ಮೇರೆ ಸರ್ಕಾರವು ಇದಕ್ಕೆ ಅನುಮತಿ ಕೊಟ್ಟಿತ್ತು. ಅದೇ ಸಮಯದಲ್ಲಿ ಕೇಂದ್ರ ಸರ್ಕಾರವು ಎಸ್.ಸಿ. ರಾಮಪ್ಪನವರಿಗೆ ಐ.ಟಿ.ಎಫ್ ಕಮಿಷನ್ ಕೊಟ್ಟಿತ್ತು. ಹಾಗಾಗಿ ಅವರು 3ನೇ ಕಂಪನಿಯ ಕಮಾಂಡರಾದರು.

**14 ಕೂರ್ಗ್ ಬೆಟಾಲಿಯನ್‌ಗೆ ಯುದ್ಧ ಸನ್ನದಿಗಾಗಿ ಆಜ್ಞೆ**

1938-39ರಲ್ಲಿ 2ನೇ ವಿಶ್ವ ಯುದ್ಧವು ಪ್ರಾರಂಭವಾಯಿತು. ಜೂನ್ - ಜುಲೈ 1940 ರಲ್ಲಿ 14 ಕೂರ್ಗ ಬೆಟಾಲಿಯನ್‌ಗೆ ಯುದ್ಧ ಸನ್ನದಿ ಮಾಡಲು ಆಜ್ಞೆ ಸಿಕ್ಕಿತ್ತು. ಅದೇ ಸಮಯದಲ್ಲೆ ಕೊಡಗು ಸರ್ಕಾರವು ಯುವಕರಿಗೆ ಸೈನ್ಯಕ್ಕೆ ಸೇರಲು ಕರೆ ನೀಡಿತ್ತು. ಆ ಸಮಯದಲ್ಲಿ ಕೆಲಸ ಸಿಕ್ಕುವುದು ಕಷ್ಟವಾಗಿತ್ತು. ಹಾಗಾಗಿ ನಾನು 17-8-1940 ರಲ್ಲಿ ಮಡಿಕೇರಿಯಲ್ಲಿ 14 ಕೂರ್ಗ ಬೆಟಾಲಿಯನ್‌ಗೆ ಸೇರಿದೆನು. ಅಂದಿನಿಂದ ಸೈನ್ಯದಲ್ಲಿ ನನ್ನ ಯಾತ್ರೆ ಪ್ರಾರಂಭವಾಯಿತು.

ಮನೆಯಿಂದ ತಾಯಿಯ ಆಶೀರ್ವಾದ ಪಡೆದುಕೊಂಡು ಮಡಿಕೇರಿಗೆ ಬಂದು, ಅಲ್ಲಿಂದ ಬೆಂಗಳೂರು ಮುಖಾಂತರ ಸಿಕಂದರಾಬಾದಿನ ಹತ್ತಿರ ಇರುವ ಬೋಳರಾಂ ಎಂಬ ಸ್ಥಳಕ್ಕೆ ಬಂದೆನು. ಸುಮಾರು 3 ತಿಂಗಳ ತರಬೇತಿ ಪಡದ ನಂತರ, ಬೆಟಾಲಿಯನ್ ಇಲ್ಲಿಂದ ಪೂನಾದ ಹತ್ತಿರ ಇದ್ದ ದೇವು ರೋಡು ಎಂಬ ಸ್ಥಳಕ್ಕೆ ಬಂತು. ಈ ಸ್ಥಳವು ನಾನಾ ತರಹದ ಅಮ್ಯೂನೇಷನ್‌ಗಳ ಸಂಗ್ರಹಾಲಯವಾಗಿತ್ತು. ಇಲ್ಲಿಂದ ಅವುಗಳನ್ನು ಎಸ್ಕಾರ್ಟ್ ಮೂಲಕ ಬೇಥೆ ಬೇರೆ ಸ್ಥಳಗಳಿಗೆ ಕಳುಹಿಸಲ್ಪಡುತ್ತಿದ್ದೆವು. ಈ ರೀತಿಯ ಸರಬರಾಜು ಮಾಡಲು ನಾನು ಮತ್ತು 7 ಜನರ ಒಂದು ತಂಡವು ಬರೇ ಅಮ್ಯೂನೇಶನ್ ತುಂಬಿದ ರೈಲು ಗಾಡಿಯನ್ನು ಡಿಸೆಂಬರ್ 1940ರಲ್ಲಿ ಮೊದಲನೇ ಬಾರಿ ಕಲ್ಕತ್ತಾದ ಹತ್ತಿರ ಇರುವ ಡೈಮಂಡ್ ಬಂದರಿಗೆ ತೆಗೆದುಕೊಂಡು ಹೋದೆವು. ಅಲ್ಲಿಂದ ಹಿಂತಿರುಗಿ ಬರುವಾಗ ನಾವು ಕಾಶಿಗೆ ಹೋದೆವು. ಅಲ್ಲಿ ನಾನು ನನ್ನ ತಂದೆಯವರ ಹೆಸರಿನಲ್ಲಿ ಪಿಂಡ ಹಾಕಿದೆನು. ಇಂತಹ ಸಂದರ್ಭ ನನಗೆ ಸಿಕ್ಕಿದ್ದು ನನ್ನ ಪುಣ್ಯವೆಂದು ಭಾವಿಸಿದೆ. ಆ ಸಮಯದಲ್ಲಿ ಅಲ್ಲಿ ವಿಚಾರಿಸಿದಾಗ ಕೊಡಗಿನ ಕೊನೆ ರಾಜನ ಸಮಾದಿ ಮತ್ತು ಸೆರೆಯಲ್ಲಿಟ್ಟ ಮನೆಯು ಪಕ್ಕದಲ್ಲಿ ಇದೆ ಎಂದು ತಿಳಿದು ಬಂತು. ಸಮಯ ಕಡಿಮೆಯಾದ ಕಾರಣ ಆ ಸ್ಥಳಗಳಿಗೆ ಹೋಗಲು ಸಾಧ್ಯವಾಗಲಿಲ್ಲ. ಇದಾದ ನಂತರ ನಮ್ಮ ಕಂಪನಿಯು ಯುದ್ಧದಲ್ಲಿ ಸೆರೆ ಹಿಡಿದ ಇಟಾಲಿಯನ್ ಕೈದಿಗಳನ್ನು ಮುಂಬಯಿ ಬಂದರಿಂದ ಭೋಪಾಲಗೆ ತೆಗೆದುಕೊಂಡು ಹೋಗಿ ಕೈದಿ ಕ್ಯಾಂಪಿನಲ್ಲಿ ಬಿಟ್ಟು ಬಂದೆವು. ನಾನು ಇಲ್ಲಿ ಇದ್ದಾಗ ದೇವುರೋಡಿನ ಸಮೀಪದಲ್ಲಿದ್ದ ಸಂತ ತುಕಾರಾಂರವರ ಜನ್ಮ ಸ್ಥಳಕ್ಕೆ ಹೋಗಿ ಪ್ರಾರ್ಥನೆ ಮಾಡಿದೆನು.

ಮಾರ್ಚ್-ಏಪ್ರಿಲ್ 1941ರಲ್ಲಿ ಬೆಟಾಲಿಯನ್ ದೇವು ರೋಡಿನಿಂದ ಔರಂಗಬಾದಿಗೆ ಬಂತು. ನಾವು ಎಲ್ಲಾ ಇದ್ದಾಗ ಇಲ್ಲಿಂದ ಸ್ವಲ್ಪ ದೂರ ದೌಲತಾಬಾದ್ ಕುಂದಿನಲ್ಲಿದ್ದ 32 ಕಲ್ಲುಗಳಲ್ಲಿ ಕೆತ್ತಿ ಮಾಡಿದ ಲೋಕ ಪ್ರಸಿದ್ಧವಾದ ಎಲ್ಲೋರ

ಗುಹೆಗಳನ್ನು ಹೋಗಿ ನೋಡಿದೆವು. ಇವುಗಳಲ್ಲಿ 16 ಗುಹೆಗಳು ಬುದ್ಧನ ಪ್ರತಿಮೆಗಳು, ಬಾಕಿ 16 ಗುಹೆಗಳು ಹಿಂದುಗಳ ದೇವರು ಮತ್ತು ದೇವತೆಗಳ ಪ್ರತಿಮೆಗಳಾಗಿದ್ದವು. ಇವುಗಳಲ್ಲಿ ಇಂದ್ರ ಸಭೆಯು ಬಹಳ ಆಶ್ಚರ್ಯಕರವಾದ ದೃಶ್ಯವಾಗಿತ್ತು. ಇದರ ಪಕ್ಕದಲ್ಲಿ ಔರಂಗ ಜೇಬನ ಸಮಾದಿ ಸಹಾ ಇತ್ತು.

**ಬೆಟಾಲಿಯನ್‌ನ ಪುನರ್ ರನೆ :**

ಜುಲೈ-ಆಗಸ್ಟ್ 1941ರಲ್ಲಿ ಇಷ್ಟರವರೆಗೆ ಕರೆದು ಕೊಂಡಿದ್ದ 14 ಕೂರ್ಗಬೆಟಾಲಿಯನ್ ಐ.ಟಿ.ಎಫ್. ಕ್ರಮ ಬದ್ಧವಾದ 1 ಕೂರ್ಗ ಬೆಟಾಲಿಯನ್ನಾಗಿ ಪುನರ್‌ಚನೆ ಆಯಿತು. ಆ ಸಮಯದಲ್ಲಿ ಹೊಸ ಬೆಟಾಲಿಯನ್‌ನಲ್ಲಿ ಇರಲು ಇಷ್ಟ ಪಡದವರನ್ನು ಮನೆಗೆ ಕಳುಹಿಸಲಾಯಿತು. ಹೀಗೆ ಹೋದವರ ಸಂಖ್ಯೆಗಳನ್ನು ಪೂರ್ತಿ ಮಾಡಲು ಆಗ ಕ್ಯಾಪ್ಟನ್‌ರಾಗಿದ್ದ ಯಸ್.ಪಿ. ರಾಮಪ್ಪನವರ ಮುಖಂಡತ್ವದಲ್ಲಿ ಒಂದು ತಂಡವನ್ನು ಕೊಡಗಿಗೆ ಕಳುಹಿಸಿ ಯುವಕರನ್ನು ಸೇರಿಸಿ ಕರೆ ತಂದರು.

ನವೆಂಬರ್ 1941 ರಲ್ಲಿ ಬೆಟಾಲಿಯನ್ ನನ್ನು ಆರ್ಮಿ ಸ್ಕೂಲ್ ಆಫ್ ಎಜುಕೇಶನ್ ಪಚ್ಚಮಾರಿ (ಮಧ್ಯ ಪ್ರದೇಶ)ಗೆ 9 ತಿಂಗಳ ವಿಶೇಷ ತರಬೇತಿಗಾಗಿ ಕಳುಹಿಸಿತ್ತು. ಇಲ್ಲಿಗೆ ಹೋಗಲು ಇಟ್ಯಾರ್ಸಿ ದಾಟಿ ಪಿಪ್ಪೇರಿಯ ಎಂಬ ರೈಲು ನಿಲ್ದಾಣದಲ್ಲಿ ಇಳಿಯ ಬೇಕಾಗಿತ್ತು. ಇಲ್ಲಿಂದ ವಾಹನಗಳ ಮೂಲಕ ಪಳನಿಯಿಂದ ಕೊಡೈಕೆನಾಲ್‌ಗೆ ಹೋದ ಹಾಗೆ ಕುಂದು ಹತ್ತಿ ಹೋಗಬೇಕಾಗಿತ್ತು. ಇದು ನಾಗಪುರ, ಮಧ್ಯಪ್ರದೇಶದ ರಾಜಧಾನಿಯಾಗಿದ್ದಾಗ, ರಾಜಪಾಲರ ಬೇಸಿಗೆಯ ನಿವಾಸ ಸ್ಥಾನವಾಗಿತ್ತು. ನಾನು ಭಸ್ಮಾಸುರನ ಕಥೆಯನ್ನು ಪುಸ್ತಕದಲ್ಲಿ ಓದಿದ್ದೆ, ಅಲ್ಲದೇ ಸಿನಿಮಾದಲ್ಲಿ ತೋರಿಸಿದ್ದನ್ನು ನೋಡಿದ್ದೆ. ಆದರೆ ಅದು ಎಲ್ಲಿ ಇತ್ತು ಎಂಬುವುದು ಗೊತ್ತಿದ್ದಿಲ್ಲ. ಆ ಅವಕಾಶವು ಇಲ್ಲಿ ದೊರಕಿತು. ಭಸ್ಮಾಸುರನು ಭಸ್ಮವಾದ ಸ್ಥಳವು ಈ ಸ್ಥಳದಿಂದ ಸುಮಾರು 3ಕಿ.ಮೀ ದೂರ ಮಹದೇವ ಬೆಟ್ಟಗಳ ತಳದಲ್ಲಿ ಇದೆ. ಅವನು ತಪಸ್ಸು ಮಾಡಿದ ಸ್ಥಳವು ಭಸ್ಮವಾದ ಸ್ಥಳದಿಂದ ಸುಮಾರು 5-6 ಕಿ.ಮೀ. ಕುಂದಿನ ಮೇಲೆ ಒಂದು ಗುಹೆಯಲ್ಲೆ ಇದೆ. ಶಿವರಾತ್ರಿ ದಿನ ಇಲ್ಲಿ ಹಬ್ಬ ನಡೆಯುತ್ತದೆ.

1942 ಆಗಸ್ಟ್ ತಿಂಗಳ ಪ್ರಾರಂಭದಲ್ಲಿ ತರಬೇತಿ ಮುಗಿಸಿ ಬೆಟಾಲಿಯನ್‌ಗೆ ಬಂದೆನು. ಅದು ಆಗ ಜಬ್ಬಲಪುರಕ್ಕೆ ಬಂದಿತ್ತು. ಮಹಾತ್ಮಗಾಂಧಿಯವರ ಕ್ವಿಟ್‌ಇಂಡಿಯಾ ಸತ್ಯಾಗ್ರಹವು ಬಹಳ ಜೋರಾಗಿ ನಡೆಯುತ್ತಿದ್ದ ಕಾಲವದು.

ಅಕ್ಟೋಬರ್ 1942ರಲ್ಲಿ ಬೆಟಾಲಿಯನ್ ನನ್ನನ್ನು ಯು.ಓ.ಟಿ.ಸಿ.(ಯುನಿವರ್ಸಿಟಿ ಆಫೀಸರ್ಸ್ ಟ್ರೈನಿಂಗ್ ಕೋರ್ಸ್)ಗೆ ಶಿಕ್ಷಕನಾಗಿ ದೆಹಲಿಗೆ ಕಳುಹಿಸಿತು. ಇಲ್ಲಿಂದ ನಾನು 1½ ತಿಂಗಳು ವೈಸರಾಯ ಕಮೀಷನ್ ಆಫೀಸರ್ ತರಬೇತಿಗಾಗಿ ಝಾನ್ಸಿಗೆ ಹೋದೆನು. ತರಬೇತು ಮುಗಿದ ನಂತರ ಜುಲೈ 1943ರಲ್ಲಿ ವಿ.ಸಿ.ಓ. ಕಮಿಷನ್ ಸಿಕ್ಕಿತ್ತು. ಇಲ್ಲಿ ಇದ್ದಾಗ ಕ್ಯಾಡೆಟ್‌ಗಳನ್ನು ಅವರ ವಾರ್ಷಿಕ ತರಬೇತಿ ಕ್ಯಾಂಪ್ ನಡೆಯಿಸಲು ಡೆಹರಾಡೂನ್‌ನ ಹತ್ತಿರ ಕ್ಲೆಮೆಂಟ್ ಟೌನ್, ಈಗ ಐ.ಎಮ್.ಎ.ಗೆ ಹೋದೆನು. ಆಗ ಅದು ಇಟಾಲಿಯನ್ ಕೈದಿಗಳ ಕ್ಯಾಂಪ್ ಆಗಿತ್ತು. ಆಗ ಅಲ್ಲಿ ಕೊಡಗು ಬೆಟಾಲಿಯನ್‌ನಲ್ಲಿದ್ದ ನಾಪೋಕ್ಲು ಮುಕ್ಕಾಟಿರ ಕೆ. ದೇವಯ್ಯನವರು ಕ್ಯಾಂಪಿನ ಒಬ್ಬ ಆಫೀಸರಾಗಿ ಇದ್ದರು. ನಾನು ಇಲ್ಲಿ ಇದ್ದಾಗ, 30 ಮೈಲು ದೂರದಲ್ಲಿದ್ದ ರಮ್ಯವಾದ ಮಸ್ಸೂರಿ ಬೆಟ್ಟಗಳನ್ನು ಹೋಗಿ ನೋಡಿದೆನು.

1944ರ ಅಂತ್ಯದಲ್ಲಿ ಬೆಟ್ಯಾಲಿಯನ್‌ಗೆ ಬರ್ಮಕ್ಕೆ ಹೋಗಲು ಆಜ್ಞೆ ಸಿಕ್ಕಿದ್ದರಿಂದ ಹೊರಗೆ ಕಳುಹಿಸಿದ್ದ ವ್ಯಕ್ತಿಗಳನ್ನು ಬೆಟಾಲಿಯನ್‌ಗೆ ಹಿಂದಕ್ಕೆ ಬರಮಾಡಿ ಕೊಂಡಿತ್ತು. ಆ ಸಮಯದಲ್ಲಿ ಅದು ನಾಗಪುರದಿಂದ ಸುಮಾರು 15 ಮೈಲು ದೂರ ಕಾಂಪ್ಟಿಯಲ್ಲಿ ಇತ್ತು. ನಾವು ಇಲ್ಲಿ ಇದ್ದಾಗ 1945ರ ಪ್ರಾರಂಭದಲ್ಲಿ ನಾಗಪುರದಲ್ಲಿ ಒಂದು ಕನ್ನಡ ಕೂಟ ನಡೆಯಿತು. ಅದಕ್ಕೆ ಶ್ರೀಮತಿ ಯಶೋದರದಾಸಪ್ಪನವರು ಮುಖ್ಯ ಅತಿಥಿಗಳಾಗಿ ಬಂದಿದ್ದರು. ಅದರಲ್ಲಿ ನಮ್ಮ ಬೆಟ್ಯಾಲಿಯನ್ ಭಾಗವಹಿಸಿತ್ತು. ಅದೇ ಸಮಯದಲ್ಲಿ ಬೆಟ್ಯಾಲಿಯನ್‌ನಲ್ಲಿ ಇದ್ದ ಗೌಡ ವಿ.ಸಿ.ಓ. ರವರು ಮತ್ತು ಕೆಳಗಿನ ದರ್ಜೆಯ ಸೈನಿಕರು ಸೇರಿ ಕೊಡಗು ಗೌಡ ವಿದ್ಯಾ ಸಂಘಕ್ಕೆ 600-00 ರೂಪಾಯಿ ಚಂದಾ ಎತ್ತಿದೆವು. (ಆಗಿನ ಕಾಲದಲ್ಲಿ ಸಿಪಾಯಿಯ ಸಂಬಳವು 16-00 ರೂಪಾಯಿ ಆಗಿತ್ತು) ಈ ದುಡ್ಡನ್ನು 1945 ರಲ್ಲಿ ನಾನು ವಾರ್ಷಿಕ ರಜಾದಲ್ಲಿ ಬಂದಾಗ ಆ ಸಮಯದಲ್ಲಿ ಸಂಘದ ಅಧ್ಯಕ್ಷರಾಗಿದ್ದ ಜಜ್ಡ್ ಯನ್. ಯಂ. ಮುದ್ದಪ್ಪನವರಿಗೆ ಕೊಟ್ಟು, ಈ ಹಣವನ್ನು ಸೈನಿಕರ ಹೆಸರಿನಲ್ಲಿ ಪ್ರತ್ಯೇಕ ಇಡಬೇಕೆಂದು ಸಲಹೆ ಕೊಟ್ಟದ್ದಕ್ಕೆ ಅವರು ಭಿನ್ನ ಭೇದ ಮಾಡುವುದು ಹಿತವಲ್ಲ ಎಂದು ಹೇಳಿದರು.

ಆ ಕಾಲದಲ್ಲಿ ಯುದ್ಧ ಭೂಮಿಗೆ ಹೋಗುವ ಮೊದಲು ಸೈನಿಕರಿಗೆ ಒಂದು ವಿಶೇಷ ತರಬೇತು ಕೊಡುತ್ತಿದ್ದರು. ಅಂದರೆ ಭೂ ಸೈನ್ಯದಲ್ಲಿ ಉಪಯೋಗಿಸುತ್ತಿದ್ದ ಎಲ್ಲಾ ತರಹದ ಆಯುಧಗಳಿಂದ ಗುಂಡು ಹೊಡೆಯುತ್ತಿದ್ದರ ಮಧ್ಯೆದಲ್ಲಿ ಸೈನಿಕರು ಮುಂದೆ ಹೋಗಿ ತಮ್ಮ ಗುರಿಗೆ ತಲುಪುವುದಾಗಿತ್ತು. ಇದಕ್ಕೆ ಬ್ಯಾಟಲ್ ಇನಾಕ್ಯೂಲೇಷನ್ ಎಂದು ಹೇಳುತ್ತಾರೆ. ಇದನ್ನು ಬೆಟ್ಯಾಲಿಯನ್ ನಾಗಪುರದಿಂದ ಸ್ವಲ್ಪ ದೂರದಲ್ಲಿದ್ದ ಚಂಡವಾಡ ಬೆಟ್ಟಗಳಲ್ಲಿ ನಡೆಸಿತ್ತು.

ಜೂನ್ 1945ರಲ್ಲಿ ನಾವು ನಾಗಪುದಿಂದ ಒಂದು ವಿಶೇಷ ರೈಲು ಗಾಡಿ ಮೂಲಕ ಅಸ್ಸಾಮಿಗೆ ಹೋಗಿ ಗೋಲಾಘಾಟನಲ್ಲಿ ಹಡಗು ಹತ್ತಿ ಬ್ರಹ್ಮಪುತ್ರಾ ನದಿ ದಾಟಿ ಈಗ ಬಾಂಗ್ಲದೇಶದಲ್ಲಿರುವ ಚಾಂದ್‌ಪುರ ರೈಲು ನಿಲ್ದಾಣಕ್ಕೆ ಬಂದು ಅಲ್ಲಿಂದ ಸುಮಾರು 50 ಮೈಲು ದೂರದಲ್ಲಿದ್ದ ದೋಹಜಾರಿ ಎಂಬ ಸ್ಥಳಕ್ಕೆ ಬಂದೆವು. ಈ ಪ್ರದೇಶವನ್ನು ಸಾಧಾರಣ ಕೊಡಗಿಗೆ ಹೋಲಿಸಬಹುದು. ಘನಕಾಡು ಹಣ್ಣು ಹಂಪಲು ಅಲ್ಲದೇ ತುಂಬಾ ಮಳೆ ಹೊಡೆಯುತ್ತದೆ. ಇಲ್ಲಿಂದ ಜುಲೈ ಅಂತ್ಯದಲ್ಲಿ ನಾವು ಜುಟ್ಟಾಗಾಂಗ್ ಬಂದರಿಗೆ ಬಂದು ಹಡಗು ಹತ್ತಿ ಎರಡು ದಿನಗಳ ಮೇಲೆ ರಂಗೂನ್‌ಗೆ ಬಂದು ತಲುಪಿದೆವು. ಇಲ್ಲಿಗೆ ಬಂದ ಮೇಲೆ ರಂಗೂನು ಮತ್ತು ಸುತ್ತಮುತ್ತಲಿನ ರಕ್ಷಣೆಯ ಕೆಲಸ ಮಾಡುತ್ತಿದ್ದೆವು.

22 ಸೆಪ್ಟೆಂಬರ್ 1945 ರಂದು 2ನೇ ವಿಶ್ವ ಯುದ್ದವು ಕೊನೆಗೊಂಡಿತು. ಸುಮಾರು ಒಂದು ತಿಂಗಳ ಮೇಲೆ ವಿಜಯ

ದಿವಸವನ್ನು ರಕ್ಷಣಾ ಪಡೆಗಳ ಎಲ್ಲಾ ಭಾಗಗಳ ರಂಗೂನಿನ ಹೊರಭಾಗದಲ್ಲಿ ಆಚರಿಸಿದ್ದೆವು. ನಾವು ಇಲ್ಲಿ ಇದ್ದಾಗ ನಮ್ಮ ಬೆಟಾಲಿಯನ್‌ನಿನ ¾ ಭಾಗ ಸೇನಾ ಪಡೆಗಳು 4 ಮಾಡಿಗಳ ಬಿ.ಒ.ಸಿ.ಯ ಮನೆಯಲ್ಲಿ ವಾಸ ಮಾಡುತ್ತಿದ್ದೆವು. ಮೈತ್ರಿ ಸೇನಾ ಪಡೆಯು ಅದಕ್ಕೆ ಹಾಕಿದ 1000 ಪೌಂಡು ಬಾಂಬು ಒಡೆಯದೆ ಸುಮಾರು ಮೂರು ಅಡಿ ಭೂಮಿಯ ಕೆಳಗೆ ಹೋಗಿ ನಿಂತಿತ್ತು. ಇದನ್ನು ನೋಡಿ ನಮಗೆ ತುಂಬಾ ಆಶ್ಚರ್ಯವಾಯಿತು. ಅಲ್ಲದೇ ರಂಗೂನಿನ ಪಕ್ಕದಲ್ಲಿದ್ದ ಪ್ರಸಿದ್ದವಾದ ಸೇವಾ ಡೊಂಗೆರ ಎಂಬ ಬುದ್ಧನ ದೇವಸ್ಥಾನವನ್ನು ಹೋಗಿ ನೋಡಲು ನಮಗೆ ಅವಕಾಶ ದೊರಕಿತ್ತು. ಇಲ್ಲಿ ಇದ್ದ ಬುದ್ಧನ ಪ್ರತಿಮೆಗಳೆಲ್ಲವೂ ಚಿನ್ನದ್ದೆ ಆಗಿದ್ದವು. ನಮ್ಮ ಬೆಟಾಲಿಯನ್‌ನಿನ ಕಂಪನಿಯ ಬರ್ಮಾದ ಉತ್ತರ ಭಾಗ ಬಸೀರ್ ಎಂಬ ಸ್ಥಳದಲ್ಲಿ ಅದರ ಸಂರಕ್ಷಣೆಗೆ ಹೋಗಿತ್ತು. ಅದು ಐರಾವದಿ ನದಿಯ ದಡದಲ್ಲಿತ್ತು. ಅದಕ್ಕೆ ಬೇಕಾಗಿದ್ದ ರಕ್ಷಣಾ ಸಾಮಾಗ್ರಿಗಳನ್ನು ಹಡಗಿನಲ್ಲಿ 1½ ದಿವಸ ಪ್ರಯಾಣ ಮಾಡಿ ಹೋಗಿ ಕೊಟ್ಟು ಬಂದೆನು. ಕೇರನ್ಸ್‌ರು ಕ್ರೈಸ್ತರೆಂದು ಬರ್ಮಾದಲ್ಲಿ ಕರೆಯುತ್ತಾರೆ. ಅವರು ಆಗ ತೊಂದರೆ ಮಾಡುತ್ತಿದ್ದರು. ಹಾಗಾಗಿ ಒಂದು ಕಂಪನಿಯನ್ನು ಆ ಪ್ರದೇಶದ ಸಂರಕ್ಷಣೆಗಾಗಿ ಕಳುಹಿಸಿತ್ತು.

1946ರ ಪ್ರಾರಂಭದಲ್ಲಿ ಬೆಟಾಲಿಯನ್ ಬರ್ಮಾದಿಂದ ಕಲ್ಕತ್ತಾಕ್ಕೆ ಬಂತು. ಆ ಸಮಯದಲ್ಲಿ ಕೋಮುವಾರು ಜಗಳ ಬಹಳ ಭಯಂಕರವಾಗಿ ನಡೆಯುತ್ತಿತ್ತು. ಸ್ವಲ್ಪ ಸಮಯದ ಮೇಲೆ ನಾವು ಇಲ್ಲಿಂದ ಅಸನ್‌ಸೂಲ್ ಸಮೀಪ ಪನಾಗಡ್ ಎಂಬ ಸ್ಥಳಕ್ಕೆ ಬಂದೆವು. ಇಲ್ಲಿಗೆ ದಿವಂಗತ ಫೀಲ್ಡ್ ಮಾರ್ಷಲ್ (ಆಗ ಬ್ರಿಗೇಡಿಯರ್) ಕೆ.ಎಂ. ಕಾರ್ಯಪ್ಪ ಒ.ಬಿ.ಇ. ನವರು ಬಂದರು. ಆಗ ಅವರು ಕೂರ್ಗ್ ಬೆಟಾಲಿಯನ್‌ನನ್ನು ಒಡೆದು ಹಾಕುವುದಿಲ್ಲ. ಬದಲು ಆರ್ಟಿಲ್ಲರಿ ರೆಜಿಮೆಂಟಾಗಿ ಮಾಡುತ್ತೇವೆ ಎಂದು ಹೇಳಿದರು. ಇದರ ಪ್ರಕಾರ ಜೂನ್ 1946ರಲ್ಲಿ ಬೆಟಾಲಿಯನ್ ಕಾಮರೇ (ಆಂಧ್ರ ಪ್ರದೇಶ)ಗೆ ಬಂತು. ಇಲ್ಲಿ ಇಷ್ಟರವರೆಗೆ ಪದಾತಿ ಸೈನ್ಯವಾಗಿದ್ದ (ಇನ್ಫೆಂಟ್ರಿ) 1 ಕೂರ್ಗ ಬೆಟಾಲಿಯನ್ 37 (ಕೂರ್ಗ) ಅಂಟಿಟಾಂಕ ರೆಜಿಮಂಟ್ ಆರ್ಟಿಲ್ಲರಿ ಎಂದು ಹೆಸರು ಬದಲಾಯಿತು. ಈ ಸಂದರ್ಭದಲ್ಲಿ ಹೊಸರೆಜಿಮಂಟ್‌ನಲ್ಲಿ ಇರಲು ಇಷ್ಟ ಪಡದವರನ್ನು ಮನೆಗೆ ಕಳುಹಿಸಿದರು. ಹೋದವರಿಗೆ ಕೊಡಗು ಸರ್ಕಾರವು ಇನಾಮಾಗಿ ಕೆಲವರಿಗೆ 10 ಎಕರೆ ಕಾಡು, ಮತ್ತು ಕೆಲವರಿಗೆ 50 ಎಕರೆ ಯಾಲಕ್ಕಿ ಮಲೆ, ಇನ್ನು ಕೆಲವರಿಗೆ 3 ಎಕರೆ ಭೂಮಿ ಕೊಟ್ಟಿತು.

ರೆಜಮೆಂಟು ಪುನರ್ರ ರಚನೆಯಾದ ಸ್ವಲ್ಪ ಸಮಯದ ಮೇಲೆ ಇದಕ್ಕೆ ರಾವಲ್ ಪಿಂಡಿಗೆ ಹೋಗಲು ಆಜ್ಞೆ ಸಿಕ್ಕಿತು. ಇದಕ್ಕೆ ಅನುಸಾರವಾಗಿ ಮಾರ್ಚಿ 1947ರಲ್ಲಿ ನಮ್ಮ ರೈಲು ಗಾಡಿ ಹೋಗಿ ಲಾಹೋರಿಗೆ ತಲುಪಿದಾಗ ಕೋಮುವಾರು ತೊಂದರೆಯಿಂದ ಮುಂದೆ ಹೋಗಲು ಸಾಧ್ಯವಾಗಲಿಲ್ಲ. ಇದರಿಂದಾಗಿ ನಾವು ಮಿಲಿಟರಿ ವಾಹನಗಳಲ್ಲಿ ರಸ್ತೆ ಮೂಲಕ ರಾವಲ್ಪಿಂಡಿಗೆ ಹೋದೆವು. ನಾವು ಇಲ್ಲಿ ಇದ್ದಾಗ ಹಿಂದು ಮತ್ತು ಸಿಖ್‌ಗಳ ರಕ್ಷಣೆಯ ಕೆಲಸವನ್ನು ಕೈಗೊಂಡೆವು. ಸ್ವಲ್ಪ ಸಮಯದ ನಂತರ ನಾವು ಇಲ್ಲಿಂದ ಅಬಟ್ಟ್‌ಬಾದಿಗೆ ಹೋದೆವು. ಇಲ್ಲಿ ಇದ್ದಾಗ ಕ್ಯಾಪ್ಟನ್ ಯಸ್.ಪಿ. ರಾಮಪ್ಪನವರಿಗೆ ಕೇಂದ್ರ ಸರ್ಕಾರವು ಕೊಟ್ಟ ಲಾಂಗ್ ಸರ್ವೀಸ್ ಮೆರಿಟ್ ಪ್ರಶಸ್ತಿಯನ್ನು ರೆಜಿಮೆಂಟಿನ ವಿಶೇಷ ಪೆರೇಡಿನಲ್ಲಿ ಕಮಾಂಡಿಂಗ್ ಆಫೀಸರು ಕೊಟ್ಟರು. ಇದಾಗಿ ಸ್ವಲ್ಪ ಸಮಯದ ಮೇಲೆ ಇಂಡಿಯಾಕ್ಕೆ ಸ್ವಾತಂತ್ರ್ಯ ಸಿಕ್ಕಿತು. ಆಗಸ್ಟ್ 15ರ ಮೊದಲನೆಯ ಸ್ವಾತಂತ್ರ್ಯದ ದಿನವನ್ನು ರೆಜಿಮೆಂಟಿನ ವಿಶೇಷ ಪೆರೇಡಿನ ಮೂಲಕ ನಾವು ಇಲ್ಲಿ ಆಚರಿಸಿದ್ದೆವು.

ಸೆಪ್ಟಂಬರ್ 1947ರಲ್ಲಿ ರಜಿಮೆಂಟಿನ ಹಿಂದು ಮತ್ತು ಸಿಖ್ ರೆಪ್ಯೂಜಿ ಸಂರಕ್ಷಣೆಗಾಗಿ ವಾಹ ಎಂಬ ರೆಫ್ಯೂಜಿ ಕ್ಯಾಂಪಿಗೆ ಬಂತು. ಇದು ಸಿಖ್ ಧರ್ಮದವರ ಗುರುದ್ವಾರ ಪಂಜಾಬಿನ ಪಕ್ಕದಲ್ಲಿ ಇತ್ತು. ಈ ಗುರುದ್ವಾರಕ್ಕೆ ಪಂಜಾಸಾಬ್ ಎಂಬ ಹೆಸರು ಬರಲು ಕಾರಣವೇನೆಂದರೆ, ಅವರ ಇತಿಹಾಸದ ಪ್ರಕಾರ ಗುರುನಾನಕ್ ದೇವರು ಕುಂದಿನ ಕೆಳಗೆ ತಪಸ್ಸು ಮಾಡುತ್ತಿದ್ದರಂತೆ, ಆ ಸಮಯದಲ್ಲಿ ಕುಂದಿನ ಕೊಡಿಯಲ್ಲಿ ಕೂತಿದ್ದ ಫಾಕೀರನು ಒಂದು ಬಂಡೆಯನ್ನು ಉರುಳಿಸಿದಾಗ ಗುರು ಅದನ್ನು ಅಂಗೈಯಲ್ಲಿ (ಪಂಜಾಬಿನಲ್ಲಿ ಅಂಗೈಗೆ ಪಂಜ ಎಂದು ಹೇಳುತ್ತಾರೆ) ಒತ್ತಿ ಮೇಲೆ ಬರದ ಹಾಗೆ ನಿಲ್ಲಿಸಿದರಂತೆ. ಹಾಗಾಗಿ ಇದಕ್ಕೆ ಈ ಹೆಸರು ಬಂತು. ಇಲ್ಲಿ ನಮಗೆ ರಫ್ಯೂಜಿ ಕ್ಯಾಂಪಿನ ರಕ್ಷಣೆ ಮಾತ್ರವಲ್ಲದೆ ಅವರನ್ನು ಇಂಡಿಯಾಕ್ಕೆ ತರುವುದು ಸಹಾ ಆಗಿತ್ತು. ಹಾಗಾಗಿ ಮೊದಲನೆಯ ಬಾರಿ ನಮ್ಮ ಬೇಟ್ರಿಯು ರೆಫ್ಯೂಜಿಗಳನ್ನು ತುಂಬಿದ ಒಂದು ರೈಲು ಗಾಡಿ ಹೊರಟಿತು. ನಾವು ಇಲ್ಲಿಂದ ಸುಮಾರು 70 ಮೈಲುಗಳ ದೂರದಲ್ಲಿದ್ದ ಗುಜರಾನ್‌ವಾಲಾ ಎಂಬ ರೈಲು ನಿಲ್ದಾಣಕ್ಕೆ ಬಂದು ತಲುಪಿದಾಗ ರೈಲು ಅಧಿಕಾರಿಗಳು ಎಲ್ಲಾ ನೀರಿನ ನಳಗಳನ್ನು ಬಂದು ಮಾಡಿ ಬಿಟ್ಟರು. ಅಲ್ಲಿಂದ ಜೇಲಂ ಪಟ್ಟಣದವರೆಗೆ ಎಲ್ಲಿಯೂ ಕುಡಿಯಲು ನೀರು ಸಿಕ್ಕದೆ ರೆಫ್ಯೂಜಿಗಳಿಗೆ ಬಹಳ ಕಷ್ಟವಾಯಿತು. ಆಮೇಲೆ ತೊಂದರೆ ಇಲ್ಲದೆ ಅಟ್ಟಾರಿಗೆ ಬಂದೆವು. ಎರಡನೆಯ ಬಾರಿ ನನ್ನ ನಾಯಕತ್ವದಲ್ಲಿ ಒಂದು ವಿಶೇಷ ರೈಲು ಗಾಡಿ ಪಂಜಾಬಿನ ಸರಗೋದ ಎಂಬ ಸ್ಥಳದಿಂದ ಹೊರಟಿತು. ಇದರಲ್ಲಿ ನನ್ನ ಒಂದು ಟ್ರೂಪ್ ಅಲ್ಲದೆ ಬಿಹಾರ ರೆಜಮೆಂಟಿನ ಒಂದು ಪ್ಲಾಟೂನ್ ಸಹಾ ನನಗೆ ಕೊಟ್ಟಿತು. ನಾವು ಲಾಹೋರಿನ ಹಿಂದೆ ಶಾದರ ಎಂಬ ರೈಲು ನಿಲ್ದಾಣಕ್ಕೆ ತಲುಪಿದಾಗ ರೈಲು ಗಾಡಿಯನ್ನು ನಿಲ್ಲಿಸಿ ಬಿಹಾರ ರೆಜಿಮೆಂಟಿನ ಪ್ಲಾಟೂನ್‌ನನ್ನು ಕೆಳಗೆ ಇಳಿಸಬೇಕೆಂದು ಒಬ್ಬ ಸೈನ್ಯ ಅಧಿಕಾರಿ ಬಂದು ಹೇಳಿದನು. ಇದಕ್ಕೆ ನಾನು ಒಪ್ಪಲಿಲ್ಲ. ಅದೇ ಸಮಯದಲ್ಲಿ ಪ್ರಯಾಣಿಕರನ್ನು ಹೊರಗೆ ಕಳುಹಿಸುತ್ತಿರುವುದನ್ನು ನೋಡಿದೆ. ಕೂಡಲೇ ನನ್ನ ಟ್ರೂಪ್ ಮತ್ತು ಬಿಹಾರ ರಜಿಮೆಂಟಿನ ಪ್ಲಾಟೂನ್‌ಗೂ ರೆಫ್ಯೂಜಿಗಳ ಸಂರಕ್ಷಣೆಗೆ ಸಿದ್ದವಾಗಿ ಇರಿ ಎಂದು ಆಜ್ಞೆ ಮಾಡಿದೆ. ನಮ್ಮ ಸಿದ್ಧತೆಯನ್ನು ನೋಡಿ ಸ್ವಲ್ಪ ಸಮಯದ ಮೇಲೆ ಅವನು ಬಂದು ಮೇಲಿನ ಪ್ಲಾಟೂನ್‌ನನ್ನು ಇಳಿಸುವುದು ಬೇಡ ಎಂದು ಹೇಳಿದ್ದಾರೆ. ಆದುದರಿಂದ ಹೋಗಬಹುದು ಎಂದು ಹೇಳಿ ಗಾಡಿಯನ್ನು ಹೋಗಲು ಬಿಟ್ಟನು. ಆಮೇಲೆ ಜಾಲಂದರ ವರೆಗೆ ತೊಂದರೆ ಇಲ್ಲದೇ ಬಂದೆವು.

ನವೆಂಬರ್ 1947ರಲ್ಲಿ ರೆಜಿಮೆಂಟು ವಾಹಾ ಕ್ಯಾಂಪಿನಿಂದ ರಾಂಚಿಗೆ ಬಂತು. ನಾನು ಇಲ್ಲಿ ಇದ್ದಾಗ 1948 ಮಾರ್ಚಿ ಪ್ರಾರಂಭ

ದಲ್ಲಿ ನನಗೆ ಐ.ಸಿ.ಒ. (ಇಂಡಿಯನ್ ಕಮಿಷನ್ ಆಫೀಸರ್)ಸಿಕ್ಕಿ ವರ್ಗವಾಗಿ ಆರ್ಟಿಲ್ಲರಿ ತರಬೇತು ಕೇಂದ್ರ ಪೊಳ್ಳಾಚಿಗೆ ಹೋದೆನು. ಮೇ 1948ರಲ್ಲಿ ಈ ಕೇಂದ್ರ ಮುಚ್ಚಿ ಇಲ್ಲಿಂದ ನಾಶಿಕರೋಡು ದೇವಲಾಲಿಗೆ ಬಂತು. ನಾನು ಇಲ್ಲೆ ಕೆಲಸ ಮಾಡುತ್ತಿದ್ದಾಗ ರಾಮಾಯಣದಲ್ಲಿ ಹೇಳಿದ್ದ ಗೋದಾವರಿ ನದಿಯ ದಡದಲ್ಲಿ ಇದ್ದ ಪಂಚವಟಿ ಆಶ್ರಯವನ್ನು ಹೋಗಿ ನೋಡಿದೆನು.

ಜೂನ್ 1952ರಲ್ಲಿ ಪ್ರಮುಖ ಜಮ್ಮು ಪಟ್ಟಣದ ಹತ್ತಿರ ಕಾಲುಚಿಕೆನಲ್ಲಿದ್ದ 7ಫೀಲ್ಡ್ ರೆಜಿಮೆಂಟ್ ಆರ್ಟಿಲ್ಲರಿಗೆ ವರ್ಗವಾಗಿ ಹೋದೆನು. ನಾನು ಇಲ್ಲಿ ಇದ್ದಾಗ 1953ಏಪ್ರಿಲ್ 29ರಂದು ದಿವಂಗತ ಮೇಜರ್ ಯಸ್.ಪಿ. ರಾಮಪ್ಪ ಮತ್ತು ಶ್ರೀಮತಿ ರುಕ್ಮಿಣಿ ಅಮ್ಮನವರ ಮಗಳು ಹೇಮಾವತಿಯನ್ನು ಮದುವೆಯಾದೆನು.

ಜುಲೈ 1954ರಲ್ಲಿ ವರ್ಗಾ ಸಿಕ್ಕಿ ಇಲ್ಲಿಂದ 3ನೇ ಬೆಂಗಾಲ ಬೆಟ್ಟಾಲಿಯನ್ ಯಸ್.ಸಿ.ಸಿ. ಬೇರಕುಮಾರ್‌ದ ಹತ್ತಿರ ಇದ್ದ ಸೀರಾಮಪುರ ಎಂಬ ಸ್ಥಳಕ್ಕೆ ಹೋದೆನು. ಈ ಪಟ್ಟಣವು ಭಗೀರಥಿ ನದಿಯ ದಡದಲ್ಲಿದೆ. ಇದಕ್ಕೆ ಈ ಹೆಸರು ಬರಲು ಕಾರಣ ಏನೆಂದರೆ ನಾವು ಇತಿಹಾಸದಲ್ಲಿ ಓದಿದ ಪ್ರಕಾರ ಭಗೀರಥ ಋಷಿಯು ಭಸ್ಮವಾದ ತನ್ನ ಶಿಷ್ಯರ ಬೂದಿಯನ್ನು ತೊಳೆದುಕೊಂಡು ಹೋಗಲು ಗಂಗೆಯನ್ನು ಪ್ರಾರ್ಥಿಸಿದಾಗ ಗಂಗೆಯು ಭೂಲೋಕಕ್ಕೆ ಬಂದು ಬೂದಿಯನ್ನು ಸಮುದ್ರಕ್ಕೆ ತೊಳೆದುಕೊಂಡು ಹೋದಳಂತೆ. ಇದಕ್ಕೆ ಹುಗ್ಲಿನದಿ ಎಂದು ಸಹಾ ಕರೆಯುತ್ತಾರೆ. ಇದು ಗಂಗಾ ನದಿಯ ಫಾರಕ ಅಣೆಕಟ್ಟಿನ ಒಂದು ಶಾಖೆಯಾಗಿರುತ್ತೆ. ನಾನು ಇಲ್ಲಿ ಇದ್ದಾಗ ಯನ್.ಸಿ.ಸಿ. ಕ್ಯಾಡೆಟ್‌ಗಳ ವಾರ್ಷಿಕ ಕ್ಯಾಂಪ್ ನಡೆಯಿಸಲು ಡಾರ್ಜಿಲಿಂಗಿನ ಹತ್ತಿರ ಇದ್ದ ಕರ್ಸಿಯಾಂಗ ಎಂಬ ಸ್ಥಳಕ್ಕೆ ಹೋದೆನು. ಈ ಸ್ಥಳಕ್ಕೆ ಕಲ್ಕತ್ತಾದಿಂದ ನೇರವಾಗಿ ರೈಲು ಗಾಡಿಯಿಂದ ಹೋಗಲು ಸಾಧ್ಯವಿತ್ತಿಲ್ಲ. ಫರಕ್ ಅಣೆಕಟ್ಟಿನ ಸ್ವಲ್ಪ ಮೇಲೆ ಯಾತ್ರಿಕ ಹಡಗಿನಲ್ಲಿ ಗಂಗಾ ನದಿಯನ್ನು ದಾಟಿ ನೀಲಗಿರಿ ರೈಲ್ವೆ ನಿಲ್ದಾಣಕ್ಕೆ ಹೋಗಿ ಅಲ್ಲಿಂದ ನ್ಯಾರೋಗೇಜ್ ರೈಲು ಗಾಡಿ ಯಲ್ಲಿ ಮೆಟ್ಟುಪಾಳ್ಯಂನಿಂದ ಉದಕಮಂಡಲಕ್ಕೆ ಹೋದಾಗೆ ಹೋಗಬೇಕಾಗಿತ್ತು. ಆ ಸಮಯದಲ್ಲಿ ಭೂಲೋಕದಲ್ಲಿ 2ನೇಯ ಎತ್ತರವಾದ ಬೆಟ್ಟ ಕಾಂಚನ ಜುಂಗವನ್ನು ದೂರದಿಂದ ನೋಡಿದೆನು. ಇದಲ್ಲದೆ ಪಾಟ್ನದಿಂದ ಸುಮಾರು 50 ಮೈಲು ದೂರ ಸಪೂವಾಲ ಎಂಬ ಸ್ಥಳದಲ್ಲಿ ಮಳೆಗಾಲದಲ್ಲಿ ಕೊಶಿ ನದಿಯ ನೀರಿನ ಪ್ರವಾಹ ತಡೆಗಟ್ಟಲು ಯನ್.ಸಿ.ಸಿ. ಕ್ಯಾಡೆಟ್‌ಗಳ ಸಹಾಯದಿಂದ ಕಟ್ಟೆ ಕಟ್ಟುವಾಗ ಅದರ ಮೇಲ್ವಿಚಾರಣೆಗಾಗಿ ಸುಮಾರು 2 ತಿಂಗಳು ಕ್ಯಾಂಪ್ ನಡೆಸಿದೆನು. ಅಲ್ಲದೆ ನಾನು ಮತ್ತು ನನ್ನ ಸಂಸಾರವು ಕಲ್ಕತ್ತಾಗೆ ಹತ್ತಿರದಲ್ಲಿದ್ದ ಶ್ರೀ ರಾಮಕೃಷ್ಣ ಪರಮಹಂಸರ ಜನ್ಮ ಸ್ಥಾನಕ್ಕೆ ಹೋಗಿ ದೇವಸ್ಥಾನದಲ್ಲಿ ಪೂಜೆ ಪುನಸ್ಕಾರವನ್ನು ಮಾಡಿದೆವು.

ಸೆಪ್ಟೆಂಬರ್ 1956ರಲ್ಲಿ ಇಲ್ಲಿಂದ ವರ್ಗವಾಗಿ 11ಫೀಲ್ಡ್ ರೆಜಿಮೆಂಟ ಆರ್ಟಿಲ್ಲರಿ ಫಿರೋಜ್‌ಪುರಕ್ಕೆ ಹೋದೆನು. ನಾನು ಇಲ್ಲಿಂದ ಸ್ಕೂಲ್ ಆಫ್ ಆರ್ಡನನ್ಸ್ ಜಬ್ಬಲ್‌ಪುರಕ್ಕೆ ಕ್ವಾರ್ಟರ್ ಮಾಸ್ಟರನ ತರಬೇತಿಗೆ ಹೋದೆನು. ಆಗ ಅಲ್ಲೆ ಹತ್ತಿರದಲ್ಲಿದ್ದ ನರ್ಮದಾ ನದಿಗೆ ಹೋಗಿ ಅಲ್ಲಿಂದ ಹಾಲುಕಲ್ಲಿನ ಗಣಿಯನ್ನು ನೋಡುವ ಸಂದರ್ಭ ಒದಗಿತ್ತು. ತರಬೇತು ಮುಗಿದ ನಂತರ ರೆಜಿಮೆಂಟಿನ ಕ್ವಾರ್ಟರ್ ಮಾಸ್ಟರಾಗಿ ಕೆಲಸ ಮಾಡುತ್ತಿದ್ದೆನು.

ಆಗಸ್ಟ್ 1959ರಲ್ಲಿ ರೆಜಿಮೆಂಟ್ ಶ್ರೀನಗರದಿಂದ ಸುಮಾರು 20 ಮೈಲು ದೂರದಲ್ಲಿದ್ದ ಪಟ್ಟನ್ ಎಂಬ ಸ್ಥಳಕ್ಕೆ ಹೋಯಿತು. ಇಲ್ಲಿಂದ ನಾನು ಇದ್ದ ಬೇಟ್ರಿಯ ಸುಮಾರು 100 ಮೈಲು ದೂರದಲ್ಲಿದ್ದ ತಂಗಧಾರ ಎಂಬ ಸ್ಥಳಕ್ಕೆ ರೆಜಿಮೆಂಟ್ ಕಳುಹಿಸಿತ್ತು. ಇದು ಇಂಡಿಯಾ, ಪಾಕಿಸ್ತಾನದ ಸರಹದ್ದಿನಲ್ಲಿ ಇತ್ತು. ಇಲ್ಲಿಗೆ ಬೇಸಿಗೆ ಕಾಲದಲ್ಲಿ ವಾಹನಗಳ ಮೂಲಕ ಹೋಗಬಹುದಾಗಿತ್ತು. ಆದರೆ ಚಳಿಗಾಲದಲ್ಲಿ ಕುಪ್ಪುವಾಡ ಜಿಲ್ಲೆಯಲ್ಲಿದ್ದ ಚೌವುಕಿಬಾಲ್ ಎಂಬ ಸ್ಥಳದವರೆಗೆ ವಾಹನಗಳಲ್ಲಿ ಹೋಗಬಹುದಾಗಿತ್ತು. ಆಮೇಲೆ ಅಕ್ಟೋಬರ್ ತಿಂಗಳಿಂದ ಏಪ್ರಿಲ್ ತಿಂಗಳವರೆಗೆ ಸುಮಾರು 26ಮೈಲು ಸಾಧಾರಣ 10000-12000 ಅಡಿ ಎತ್ತರ 8-10 ಅಡಿ ಎತ್ತರ ಹಿಮ ತುಂಬಿದ ನಸ್ತಚೋನ್ ಕಣಿವೆ ಮೂಲಕ ನಡೆದುಕೊಂಡು ಹೋಗ ಬೇಕಾಗಿತ್ತು. ಈ ಪ್ರಯಾಣವನ್ನು ರಾತ್ರಿ ಮಾಡಬೇಕಾಗಿತ್ತು. ಅಲ್ಲೆ ಸೈನಿಕರು ಕಂದಕ (ಬಂಕರ) ದಲ್ಲಿ ವಾಸ ಮಾಡಬೇಕಾಗಿತ್ತು.

1961 ಜನವರಿಯಲ್ಲಿ ನನಗೆ ಇಲ್ಲಿಂದ ಹೊಸದಾಗಿ ನಿರ್ಮಿಸಬೇಕಾಗಿದ್ದ 62 ಫೀಲ್ಡ್ ರೆಜಿಮೆಂಟ್ ಆರ್ಟಿಲ್ಲರಿ ಹೈದರಾಬಾದ್‌ಗೆ ಬೆಟ್ರಿ ಕಮಾಂಡರ್ ಆಗಿ ವರ್ಗಾ ಸಿಕ್ಕಿ ಬಂದೆನು. ಇಲ್ಲಿ ಎರಡು ವರ್ಷ ತರಬೇತು ಪಡೆದ ನಂತರ ಈ ರೆಜಿಮೆಂಟು ರಾವಿ ನದಿಯ ದಾಟಿ ಕತ್ವ ಜಿಲ್ಲೆಗ ಹೋಗಲು ಆಜ್ಞೆ ಸಿಕ್ಕಿತು. ಇಲ್ಲಿಗೆ ಹೋಗಿ ಸ್ವಲ್ಪ ಸಮಯದ ಮೇಲೆ 1963ರಲ್ಲಿ ನನಗೆ ತರಬೇತು ರೆಜಿಮೆಂಟಿನ ಕಮಾಂಡಿಂಗ್ ಆಫೀಸರ್ ಆಗಿ 2ನೇ ಆರ್ಟಿಲ್ಲರಿ ತರಬೇತಿ ಕೇಂದ್ರ ಗೋಲ್ಕಂಡ ಕೋಟೆ ಹೈದರಾಬಾದ್‌ಗೆ ವರ್ಗ ಸಿಕ್ಕಿ ಬಂದೆನು. 1969ರಲ್ಲಿ ಕಾಶ್ಮೀರಕ್ಕೆ ಹೋಗುವ ಸಮಯದಲ್ಲಿ ಬೆಂಗಳೂರಿನಲ್ಲಿ ತಂದು ಬಿಟ್ಟ ಸಂಸಾರವನ್ನು ನಾನು 1964ರಲ್ಲಿ ಗೋಲ್ಕಂಡ ಕೋಟೆಗೆ ಕರೆದುಕೊಂಡು ಬಂದೆನು.

ಜೂನ್ 1966ರಲ್ಲಿ ನಾನು ಇಲ್ಲಿಂದ ವರ್ಗವಾಗಿ 25 ಆಂಧ್ರ ಬೆಟಾಲಿಯನ್ ಎನ್.ಸಿ.ಸಿ. ನೆಲ್ಲೂರಿಗೆ ಕಮಾಂಡಿಂಗ್ ಆಫೀಸರಾಗಿ ಹೋದೆನು. ಇಲ್ಲಿ ಇದ್ದಾಗ ನನಗೂ ಮತ್ತು ನನ್ನ ಸಂಸಾರಕ್ಕೂ ತಿರುಪತಿಗೆ ಹೋಗಿ ಒಂದು ಎರಡು ಸಲ ದೇವರ ದರ್ಶನ ಮಾಡಿದ್ದೆವು. 1968 ಜೂನ್‌ನಲ್ಲಿ ನನ್ನ ಕೋರಿಕೆ ಪ್ರಕಾರ 11ಮೈಸೂರು (ಈಗ ಕರ್ನಾಟಕ) ಬೆಟಾಲಿಯನ್ ಎನ್.ಸಿ.ಸಿ.ಗೆ ಕಮಾಂಡಿಂಗ್ ಆಫೀಸರಾಗಿ ವರ್ಗ ಸಿಕ್ಕಿ ಬೆಂಗಳೂರಿಗೆ ಬಂದೆನು. ಇಲ್ಲೆ ಇದ್ದಾಗ ಕೆಡೆಟ್‌ಗಳ ವಾರ್ಷಿಕ ಕ್ಯಾಂಪ್ ನಡೆಸಲು ಕೆ.ಜಿ.ಎಫ್. ಗೆ ಹೋದೆನು. ಆ ಸಂದರ್ಭದಲ್ಲಿ ಅಲ್ಲಿದ್ದ ಚಿನ್ನದ ಗಣಿಯ ಕಡೆಗೆ ಹೋಗಿ ಅದರ ವ್ಯವಸ್ಥೆಗಳನ್ನು ನೋಡುವ ಅವಕಾಶ ದೊರಕಿತ್ತು. ನಾನು ಸೈನ್ಯದಲ್ಲಿದ್ದಾಗ ನಮ್ಮ ನಾಲ್ಕು ಮಕ್ಕಳು ಹೆಸರು ಬಾಬಿ, ಕಾವೇರಿ, ರಾಜಿ ಮತ್ತು ಕವಿತಾ ಬೇರೆ ಬೇರೆ ಮಿಲಟರಿ ಆಸ್ಪತ್ರೆಗಳಲ್ಲಿ ಜನ್ಮವಾದರು. ಬೆಂಗಳೂರಿನಲ್ಲಿ ಪ್ರಾರಂಭಿಸಿದ ನನ್ನಜೀವನದ ಸೈನ್ಯ ಯಾತ್ರೆಯನ್ನು 17-8-69ರಲ್ಲಿ ಮುಗಿಸಿ ಸೈನ್ಯದಿಂದ ನಿವೃತ್ತರಾಗಿ 106 ಡಿಫೆನ್ಸ್ ಕಾಲೋನಿ ಬೆಂಗಳೂರಿನಲ್ಲಿ ಸಂಸಾರ ಸಾಗಿಸಲು ಪ್ರಾರಂಭಿಸಿದೆನು.

---

**ಆರೋಗ್ಯಕ್ಕಿಂತ ಮಿಗಿಲಾದ ತಪಸ್ಸಿಲ್ಲ**

## ಸಂಗಾತಿ ಭವಿಷ್ಯ : ಆಗಸ್ಟ್ 1 ರಿಂದ 15, 2000

ಜೋತಿಷ್ಯರು : ಗಿರೀಶ್‌ಕುಮಾರ್, ಕೊಯನಾಡು

**ಮೇಷ ರಾಶಿ** : ದೈವಾನುಕೂಲವಿದೆ. ವ್ಯವಹಾರ ಉದ್ಯೋಗದಲ್ಲಿ ಲಾಭಾಂಶ ನಿಮ್ಮ ಕೈ ಸೇರಲಿದೆ. ಗೃಹ ವಲಯದಲ್ಲಿ ದೇವತಾ ಕಾರ್ಯಗಳಿಗೆ ಯೋಜನೆ ಹಾಕುವಿರಿ. ಸಂಸಾರ ವಲಯದಲ್ಲಿ ನೆಮ್ಮದಿ ಉಂಟಾಗಿ ಸುಖ ಅನುಭವಿಸುವಿರಿ. ಕುಲದೇವತಾ ಆರಾಧನೆ ಮಾಡಿಕೊಂಡು ಬನ್ನಿ.

**ವೃಷಭ ರಾಶಿ** : ಶನಿದೇವರ ಉಪಟಳದಿಂದ ಮನಸ್ಸಿಗೆ ನೆಮ್ಮದಿ ಇಲ್ಲ. ಗೃಹ ವಲಯದಲ್ಲಿ ಕಲಹವೇರ್ಪಡುವುದು ಪತಿಯೊಂದಿಗೆ (ಪತ್ನಿ) ಮುನಿಸಿಕೊಳ್ಳುವಿರಿ. ಆರೋಗ್ಯವೂ ಹದಗೆಡುವುದು. ನರಕಯಾತನೆಯನ್ನು ಅನುಭವಿಸುವಿರಿ. ಪ್ರತೀ ಶನಿವಾರ ಶನಿಪೂಜೆ ಮಾಡಿಸಿಕೊಂಡು ಬನ್ನಿ ಸುಖವೂ ದೊರೆಯುವುದು.

**ಮಿಥುನ ರಾಶಿ** : ಗೃಹ ವಲಯದಲ್ಲಿ ನಷ್ಟ ಮತ್ತು ನಿಷ್ಠುರಗಳು ಎಡೆ ಬಿಡದೆ ಸಾಗುವುದು. ನಿಮ್ಮಲ್ಲಿರುವ ಐಶ್ವರ್ಯಗಳಿಗೆ ಧಕ್ಕೆ ಉಂಟಾದಿತು. ಮಾನಸಿಕ ವ್ಯಥೆಯು ಉಲ್ಬಣವಾದಿತು. ಪ್ರಯಾಣದಿಂದ ಬಲ ಭಾಗಕ್ಕೆ ಹಾನಿ ಆಗುವ ಸಂಭವವಿದೆ. "ಶ್ರೀ ವೆಂಕಟೇಶಾಯ ನಮಃ" ಎಂದು 108 ಸಲ ಜಪಮಾಡಿಕೊಂಡು ಬನ್ನಿ

**ಕರ್ಕಾಟಕ ರಾಶಿ** : ಗೃಹ ವಲಯದಲ್ಲಿ ಸ್ವಲ್ಪ ಮಟ್ಟಿಗೆ ನೆಮ್ಮದಿ ಸಿಗುತ್ತದೆ. ಉದ್ಯೋಗ ಸಂಬಂಧವಾಗಿ ಬೇರೆ ಕಡೆ ಸಂಚಾರಿಸುವಿರಿ. ಖರ್ಚು ವೆಚ್ಚಗಳು ಹೆಚ್ಚಾಗುತ್ತದೆ. ಅನಾವಶ್ಯಕವಾಗಿ ಕಲಹಕ್ಕೆ ಆಸ್ಪದ ಕೊಡಬೇಡಿ. ಎಲ್ಲಾ ದಾನಕ್ಕಿಂತ "ಸರ್ವ ದಾನವೆ" ಒಳ್ಳೆಯದೆಂದು ತಿಳಿದು ವ್ಯವಹರಿಸಿ ಕೊಂಡು ಬನ್ನಿ.

**ಸಿಂಹ ರಾಶಿ** : ಘನತೆ ಗೌರವಗಳಿಗೆ ಧಕ್ಕೆ ಬರಲಾರದು. ಶತ್ರುಗಳಿಂದ ದೂರವಿದ್ದು ವ್ಯವಹರಿಸಿಕೊಂಡು ಬನ್ನಿ. ವ್ಯವಹಾರದಲ್ಲಿ ಲಾಭಾಂಶ ನಿಮ್ಮ ಕೈ ಸೇರುವುದು. ಸತ್ಯನಾರಾಯಣ ಸ್ವಾಮಿಯ ಪೂಜೆ ಗೃಹ ವಲಯದಲ್ಲಿ ಬಂದ ವಿವಾಹಾದಿ ಭಾಗ್ಯಗಳು ಕೈ ಸೇರುವುದು ಮತ್ತು ಗೃಹ ವಲಯದಲ್ಲಿ ನೆಮ್ಮದಿ ಸಿಗುವುದು.

**ಕನ್ಯಾ ರಾಶಿ** : ಸಕಲ ವ್ಯವಹಾರಗಳಲ್ಲಿ ತುಂಬಿ ಮಟ್ಟಿನ ಲಾಭ ನಿಮ್ಮ ಕೈ ಸೇರುವುದು. ಉದ್ಯೋಗದಲ್ಲಿ ಬಡ್ತಿ ಹೊಂದುವಿರಿ. ಹಲವು ರೀತಿಯಲ್ಲಿ ಅದೃಷ್ಟ ನಿಮ್ಮ ಕೈ ಸೇರುವುದು. ಗೃಹ ವಲಯದಲ್ಲಿ ನೆಮ್ಮದಿ ಸಿಗಬಹುದು. ಸಂಚಾರದಿಂದ ಮನಸ್ಸಿಗೆ ಅಘಾತವೇರ್ಪಡುವುದು.

**ತುಲಾ ರಾಶಿ** : ಕಠಿಣ ಶತ್ರುಗಳು ನಿಮ್ಮ ಮಿತ್ರರಾಗುತ್ತಾರೆ. ಇನ್ನೊಂದೆಡೆ ಶತ್ರುಗಳು ನಾಶವಾಗುವರು. ಹೊಸ ವಾಹನ ಖರೀದಿಸುವ ಯೋಗ ಭಾಗ್ಯ ಕೂಡಿ ಬರಲಿದೆ. ಗೃಹವಲಯದಲ್ಲಿ ಹೊಸ ಭೂ ಸಂಬಂಧ ವ್ಯವಹಾರಗಳು ಪ್ರಸ್ತಾಪಕ್ಕೆ ಬರುವುದು. ಗುರುವಿನ ಮೂಲಕ ಕೆಲಸ ಪ್ರಾರಂಭಿಸಿ ಕೊಂಡು ಬನ್ನಿ.

**ವೃಶ್ಚಿಕ ರಾಶಿ** : ಸ್ವಂತ ಜನರಿಂದ ಗೃಹ ವಲಯದಲ್ಲಿ ಕಲಹವೇರ್ಪಡುವುದು. ಸರಕಾರಿ ಅಧಿಕಾರಿಗಳಿಂದ ತೊಂದರೆ ಉಂಟಾದಿತು. ವ್ಯವಹಾರ ಉದ್ಯೋಗದಲ್ಲಿ ಹಣ ಕಾಸು ಸುಧಾರಿಸಬಹುದು. ಸಂಚಾರದಿಂದ ಮನಸ್ಸಿಗೆ ನೆಮ್ಮದಿ. ಶ್ರೀ "ನಾಗಾಯ ನಮಃ, ನಾಗ ಬ್ರಹ್ಮಯ ನಮಃ, ನಾಗ ಕನ್ನಿಕಾಯ ನಮಃ" ಎಂದು ಜಪಿಸಿಕೊಂಡು ಬನ್ನಿ.

**ಧನಸ್ಸು ರಾಶಿ** : ಗೃಹ ವಲಯದಲ್ಲಿ ಸ್ವಲ್ಪ ಮಟ್ಟಿನ ನೆಮ್ಮದಿ ಉಂಟಾದಿತು. ಸರಕಾರೇತರ ಅಧಿಕಾರಿಗಳಿಂದ ನಿಮಗೆ ತೊಂದರೆ ಉಂಟಾದಿತು. ಕಬ್ಬಿಣದ ವಸ್ತುಗಳಿಂದ ಭಯ ಉಂಟಾದಿತು. ವಾದ ವಿವಾದಗಳು ಏರ್ಪಟ್ಟು ಮನಸ್ಸಿಗೆ ನೆಮ್ಮದಿ ಇಲ್ಲ. "ಶ್ರೀ ವೆಂಕಟೇಶಾಯ ನಮಃ" ಎಂದು ಕುಲದೇವತಾರಾಧನೆ ಮಾಡಿಕೊಂಡು ಬನ್ನಿ.

**ಮಕರ ರಾಶಿ** : ದೇವತಾನುಗ್ರಹವಿದೆ. ವ್ಯವಹಾರ ಉದ್ಯೋಗದಲ್ಲಿ ಲಾಭಾಂಶ ನಿಮ್ಮ ಕೈ ಸೇರಲಿದೆ. ಶತ್ರುಗಳು ನಾಶವಾಗಿ ಮನಸ್ಸಿಗೆ ನೆಮ್ಮದಿ ಉಂಟಾಗಬಹುದು. ಕೈ ಬಿಟ್ಟ ಹಣ ನಿಮ್ಮ ಕೈ ಸೇರಲಿದೆ. ಆದರೆ ಗೃಹ ವಲಯದಲ್ಲಿ ವಿವಾಹಕ್ಕೆ ಸಂಬಂಧ ಪಟ್ಟಂತಹ ವಿಷಯಗಳು ಪ್ರಸ್ತಾಪಕ್ಕೆ ಬರುವುದು.

**ಕುಂಭ ರಾಶಿ** : ದೇಹದಲ್ಲಿ ಅನಾರೋಗ್ಯ ಕಾಡಲಿದೆ. ಪುರುಷರಿಗಾದರೆ ಬಲ ಭಾಗಕ್ಕೆ, ಸ್ತ್ರೀಯರಿಗಾದರೆ ಎಡಭಾಗಕ್ಕೆ ವ್ಯಾಧಿ ಕಾಣಿಸಬಹುದು. ದೇಹದಲ್ಲಿ ರಕ್ತದ ಕೊರತೆಯಿಂದಾಗಿ ಮನಸ್ಸು ಸ್ಥಿಮಿತದಲ್ಲಿರುವುದಿಲ್ಲ. ಹಣಕಾಸಿನ ವ್ಯವಹಾರದಲ್ಲಿ ಲಾಭಾಂಶವೂ ನಿಮ್ಮ ಕೈ ಸೇರುವುದು. ಪ್ರತೀ ಶನಿವಾರ ಶನಿ ಜಪ ಮಾಡಿಕೊಂಡು ಬನ್ನಿ.

**ಮೀನ ರಾಶಿ** : ಗೃಹ ವಲಯದಲ್ಲಿ ನೆಮ್ಮದಿ ಇದೆ. ಉದ್ಯೋಗ ಸಂಬಂಧವಾಗಿ ಬೇರೆ ಕಡೆಗೆ ಸಂಚಾರಿಸಬಹುದು. ಮನಸ್ಸಿನಲ್ಲಿ ಹಲವು ಕೆಟ್ಟ ಭಾವನೆಗಳನ್ನು ಇಟ್ಟುಕೊಂಡಿರುವುದರಿಂದ ಏನೋ ಒಂದು ರೀತಿಯ ಕಳವಳ. ಹಣಕಾಸಿನ ವ್ಯವಹಾರವೂ ಸುಧಾರಿಸಬಹುದು. ದೇವತಾನುಗ್ರಹವಿದೆ.

---

**ಏ ಸುಂದರಿ, ನಿನ್ನ ನೋಡದೆ ಹೋದರೆ ಕಣ್ಣುರಿ**

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

ಲೇಖನ : ಶಂಕರನ ಬಸಪ್ಪ

ಧಾರಾವಾಹಿ -14

ಹಿಂದೆ ನಡದದ್.......

ಕೂರ್ಗಳ್ಳಿ ರಸ್ತೆಲಿ ಟ್ರಾಫಿಕ್ ಇನ್‌ಸ್ಪೆಕ್ಟರ್ ತರ ಯಾಕ್ಟ್ ಮಾಡಿ ಆತ್. ಆಮೇಲೆ ಅಲ್ಲೇ ಒಂದ್ ಹೆಣ್ಣ್ ಗೂಡೆನ ರೇಪ್ ಅಂಡ್ ಮರ್ಡರ್ ಕೇಸ್‌ನ ಹಿಡ್ದ್ ಬೊಡ್ಡ ಆ ಗೂಡೆನ ಪ್ರಾಣನ ಉಳ್ಸಿ ಆತ್. ಮಾರನೆ ದಿನ ಮೈಸೂರು ಗೈಡ್‌ನ ತರ ವೇಷ ಹಾಕಂಡ್ ನಾರ್ತ್ ಇಂಡಿಯಾ ಟೂರಿಸ್ಟ್‌ನವುಕೆ ಸಹಾಯ ಮಾಡ್‌ತ. ಮಾರನೆ ದಿನಕೆ ಬೃಂದಾವನ್ ಗಾರ್ಡನ್‌ನ ತೋರ್ಸಿಕಂಡ್ ಬರುವ ಕೆಲ್ಸ ಮಿ. ರಾಜುನ ಜವಾಬ್ದಾರಿಗೆ ಬೀತ್.

ಮುಂದಕೆ..........

ಗೈಡ್ ರಾಜು ಈ ಬಸ್‌ಂದ ಇಳ್ದ್ ಟಿಕೇಟ್ ಕೌಂಟರ್ ಹತ್ರಕೆ ಓಡ್ತ್ ಅಲ್ಲಿ ಫುಲ್ ಬಸ್ ಪಾಸ್ ಮಾಡಿಕಂಡ್ ಬಾತ್. ಬಸ್ ನೆಟ್ಟಂಗೆ ಮೇಯಿನ್ ಗೇಟ್ ದಾಟಿಕಂಡ್ ಆ ಸಣ್ಣ ಕಿರಿದಾದ ಕಟ್ಟೆಯ ರಸ್ತೆ ಮೇಲೆ ಹೋಗಿ ಒಳಗಡೆ ಹಂಗೇ ಇಳ್ಸಿ ಟೂರಿಸ್ಟ್ ಗಾಡಿಗಳ ಪಾರ್ಕಿಂಗ್ ಮದ್ಯೆಲಿ ಬಸ್‌ನ ನಿಲ್ಸಿತ್.

ಬಸ್ಸ್‌ದ ಇಳ್ದ ಆ ಎಲ್ಲಾ ಪ್ರವಾಸಿಗರ ಕರ್ಕಂಡ್ ಮೊದ್ಲು ಈ ಪುಣ್ಯನದಿ ಶ್ರೀ ಕಾವೇರಮ್ಮನ ಮೂರ್ತಿ ಸ್ಥಾಪನೆ ಮಾಡಿದ ಜಾಗಕ್ಕೆ ಕರ್ಕೊಂಡ್ ಹೋತ್. ಅಲ್ಲಿ ಆ ಜನ ಎಲ್ಲಾ ಶ್ರೀ ಕಾವೇರಮ್ಮಂಗೆ ಕೈಮುಗ್ದ್ ಬೇಡಿಕೊಂಬಕಾಕನ ಅವುಕೆಲ್ಲಾ ಅವರ ಹಿಂದಿ ಭಾಷೆಲೇ ಈ ಪುಣ್ಯ ನದಿಯ ಕಥೆನ ಹೇಳಿ ಇದರಿಂದ ಇಲ್ಲಿ ಕರ್ನಾಟಕಕ್ಕೂ ಹಂಗೇ ತಮಿಳ್ ಜನಕ್ಕೂ ಇದರ ಉಪಯೋಗನ ಹೇಳಿಕೊಟ್ಟತ್. ಆಮೇಲೆ ಕೃಷ್ಣ ರಾಜೇಂದ್ರ ಅಣೆಕಟ್ಟ್‌ನ ಕಟ್ಟಿಸಿದ ಮುಖ್ಯ ಮನುಷ್ಯನಾದ ಸರ್. ಎಂ. ವಿಶ್ವೇಶ್ವರಯ್ಯನವರ ಬಗ್ಗೆ ಸ್ವಲ್ಪ ಹೇಳಿಕಂಡ್ ಈ ಮನಮೋಹಕ ವಾದ ಗಾರ್ಡನ್‌ನ ನೋಡಿಕೆ ಅಲ್ಲಿಂದಲೇ ಸುರು ಮಾಡ್ತ್. ಹೊತ್ತ್ ಸ್ವಲ್ಪ ಕತ್ತಲೆ ಆಕೆ ಶುರು ಆತ್.

ಆಗ ಚಿಮ್ಮನೆ ಬಣ್ಣ ಬಣ್ಣದ ಕಲರ್ ಲೈಟ್ ಹತ್ತಿಕಂಡತ್. ಇವರೊಟ್ಟಿಗೆ ನಿಂತಿದ್ದ ಮಕ್ಕ ಮರಿಗ, ಗೂಡೆ ಹೈದಂಗ ಒಮ್ಮೆಗೆ ಹೋ ತ್ತೇಳಿ ಕಿರುಚಿಕಂಡ್ ಖುಷಿ ಪಟ್ರೊ. ಯಾಕತ್ತೇಳಿರೆ ಈ ಅಪರೂಪ ಸೌಂದರ್ಯಗಳ್ಳ ನೀರ್‌ನ ಚಿಲುಮೆ, ನೀರಿನ ಬುಗ್ಗೆ ಕಾರಂಜಿಗ ಈ ಬಣ್ಣದ ಬೆಳಕಲ್ ಎಷ್ಟೊಂದ್ ಪೊರ್ಲ್ ಕಾಂಬತಿ ತತ್ತೇಳಿರೆ ಅದರ ಬಾಯಿಲಿ ಹೇಳಿಕೆ ಆದುಲ್ಲೆ. ಈ ಜಾಗ ದೇವಲೋಕದ ಉದ್ಯಾನವನ ಈ ತರ ಇದ್ದದೆ ಕಂಡದೆ ತಾ ಜನ ಬಾವಿಸಿಕಂಡೊ. ಇದಕ್ಕೆ ಸರಿಯಾಗಿ ಅಲ್ಲಿಗೆ ನೋಡಿಕೆ ಬಂದಿದ್ದ ತುಂಬಾ ಜನ ಸಹ ಒಳ್ಳೊಳ್ಳೆ ಬಣ್ಣ ಬಣ್ಣದ ಡ್ರೆಸ್‌ಗಳ ಹಾಕಂಡ್, ಮಕ್ಕ ಮೊರಿಗ, ಸ್ನೇಹಿತ ಸ್ನೇಹಿತೆಗ ಜೊತೆ ಜೊತೆಯಾಗಿ ಇಲ್ಲಿಗೆ ಬಂದಿದ್ದೊ. ಯುವ ಪ್ರೇಮಿಗ ಈ ಆನಂದನ ನೋಡಿ ಆನಂದಿಸಿಕೆ ಬಂದಿದ್ದರೆ ಹೊಸದಾಗಿ ಮೊದುವೆ ಆದವು ತಮ್ಮ ಹನಿಮೂನ್ ಗೋಸ್ಕರ ಇಲ್ಲಿಗೆ ಅಗತ್ಯವಾಗಿ ಬಂದೇ ಬಂದಿದ್ದೊ. ವಯ್ಸು ಮೀರಿದ ದಂಪತಿಗ ಕೂಡ ಜೀವಮಾನಲಿ ಒಮ್ಮೆ ಆದ್ರೂ ಈ ಪೊರ್ಲ್‌ನ ಜಾಗನ ಕಣ್ ತುಂಬಾ ನೋಡಕುತ್ತೇಳುವ ಬಹಳ ಕಾಲದ ಆಶೆಂದ ಇಲ್ಲಿಗೆ ಬಂದಿದ್ದೊ. ಹಿಂಗೆ ಎಲ್ಲವೂ ಬಹಳ ಸಂತೋಷಲಿ ಎಲ್ಲಾ ಕಾರಂಜಿ ಫೌಂಟನ್‌ಗಳ ನೋಡಿಕಂಡ್ ಕೈಕೈ ಹಿಡ್‌ಕಂಡ್ ತಿರ್‌ಗಾಡಿಕಂಡ್ ಹಂಗೇ ಮಧ್ಯಭಾಗಕ್ಕೆ ಸಾಗಿ ಬಂದಾಕೆಕಾನ ಈ ಕೆಲವು ಜನಕ್ಕೆ ಮೋಟಾರ್ ಬೋಟ್ ಜನ ತುಂಬಿಕಂಡ್ ತಿರ್ಗಾಡುವುದ ಕಂಡತ್. ಸರಿ ಕೆಲವು ಜನ ಬೋಟಿಂಗ್ ಹೈ, ಬೋಟಿಂಗ್ ಹೈ, ಹಮ್‌ಭೀ ಬೋಟಿಂಗ್‌ಮೆ ಬೈಟನಾ ಹೈ ಅಂತ ಕೆಲವು ಗೂಡೆಗ ಹೈದಂಗ ಹಠ ಹಿಡಿಯಕೆ ಶುರು ಮಾಡ್ರೊ. ಸರಿ ಗೈಡ್ ಅಂಕಲ್ ಬೋಟಿಂಗ್ ಆಫೀಸ್ ಕಡೆಗೆ ಇವರ್‍ನ ಕರಕಂಡ್ ಹೋತ್. ಇವರ್‍ನ ಎರಡ್ ಗುಂಪಾಗಿ ಮಾಡಿ ಬೇರೆ ಬೇರೆ ಬೋಟ್‌ಲಿ ಕುದ್ದಿರಿಸಿತ್. ಮತ್ತೆ ಅವುಕೆ ಹೇಳ್ತ್. ಜೋಪಾನ ನೀರ್ ಮೇಲೆ ಬೋಟ್ ಹೊಕಾಕನ ಯಾರೂ ತಮಾಷೆ ಚೇಷ್ಟೆ ಮಾಡಿಕಾಗದ್‌ತ್ತೇಳಿ. ಆತ್‌ತಾ ಎಲ್ಲವೂ ಒಪ್ಪಿಕಂಡೊ. ಎರಡ್ ಬೋಟ್‌ಗಳ ತುಂಬಾ ಒಂದರ ಹಿಂದೆ ಒಂದ್‌ತ ಹೋಗುತ್ತಾ ಸ್ಪೀಡಾಗಿ ಹೋಕೆ ಶುರು ಮಾಡ್ರೊ ಅಲ್ಲಿ ಮಧ್ಯಲಿ ಬಹಳ ಎತ್ತರಕ್ಕೆ ನೀರ್ ಚಿಮ್ಮುವ ಪೌಂಟನ್‌ನ ಬಳಸಿ ಬಾಕಾಕನ ಈ ಬೋಟ್‌ಲಿ ಕುದ್ದವರ ಮೇಲೆಲ್ಲಾ ನೀರ್ ಹನಿ ಗಾಳಿಗೆ ಚಿಮ್ಮಿ ಬೀತ್. ಹೋ ಪಾನಿ ಪಾನೀ ಅಂತ ಕಿರುಚಿಕಂಡೊ. ಅಷ್ಟೊತ್ತಿಗೆ ಮುಂದೆ ಇದ್ದ ಬೋಟ್‌ಲಿ ಕುದ್ದಿದ್ದ ಹೈದ ಒಬ್ಬ ಹಿಂದೆ ಬೋಟ್‌ಲಿ ಬರ್ತಿದ ಗೂಡೆನ ಬೊಗ್ಗಿ ನೀರನ ಕೈಯಿಂದ ಚೊಂಪಿತ್. ಸರಿ ಈ ಗೂಡೆಗ ಸೇರಿಕಂಡ್ ಅತ್ತ ಕಡೆಗೆ ಬೊಗ್ಗಿ ನೀರನ ಚೋಂಪಿಕೆ ಶುರು ಮಾಡ್ರೊ. ಬೋಟ್ ಒಂದರ ಹಿಂದೆ ಹೋಗುತಾ ಉಟ್ಟು ಆಗ ಇವು ಖುಷಿಲಿ ಎಲ್ಲಾ ಮರ್ತ್‌ಕಂಡ್ ಅತ್ತ ಇತ್ತ ನೀರ್‌ನ ಚೋಂಪಾಡ್ದು, ನಗಾಡ್ದು, ಕಿರುಚಾಡ್ದು ಜಾಸ್ತಿ ಆಗಿ ಹೋತ್.

ಇದರ ಕಂಡ್ ಗೈಡ್ ಅಂಕಲ್ ಜೋರಾಗಿ ಕಿರುಚಿಕಂಡೊ. ಬಸ್‌ಕರೋ ತುಮ್ಹಾರಾ ಖೇಲ್‌ತ್ತೇಳಿ ಬಾಯಿ ಮುಚ್ಚಿಕೆ ಮೊದ್ಲು ಹಿಂದೆ ಇದ್ದ ಬೋಟ್‌ಲಿ ಒಂದ್ ಕೂಸ್‌ನ ಹಿಡ್‌ಕಂಡ್ ಕುದ್ದಿದ್ದ ದುಡುಮಿ ಹೆಂಗ್ಸ್ ದುಡುಂ ತ್ತೇಳಿಕಂಡ್ ಆ ಕೂಸ್‌ನ ಸಮೇತ ನೀರ್ ಒಳಗೆ ಬಿದ್ದ್ ಮುಳ್‌ಗಿ ಹೋತ್ ಇದರ ಕಂಡ್ ಆ ಬೋಟ್‌ಲಿ ಕುದ್ದವೆಲ್ಲಾ ಹೆದ್ರಿಕಂಡ್ ಜೋರಾಗಿ ಕಿರುಚಿಕಂಡೊ ಬಚಾವೋ ಮೆರೆ ಮಾ ಕೊ ಬಚಾವೋ ತ್ತ ಬೋಟ್ ಸ್ಪೀಡ್‌ಲಿ ಮುಂದೆ ಸಾಗಿ ಹೋತಿತ್ತ್. ಅದೇನ್ ರಸ್ತೆಲಿ ಓಡುವ ಬಸ್ಸಾ? ಬ್ರೇಕ್ ಹಾಕಿ ಒಮ್ಮೆಗೆ ನಿಲ್ಸಿಕೆ? ಅಷ್ಟೊತ್ತಿಗೆ ಇನ್ನೊಂದು ಸದ್ದ್ ಬಾತ್ ದಢಂತ್ತೇಳಿ ಬೋಟ್‌ಗ ಬಹಳ ಕಷ್ಟ ಪಟ್‌ಕಂಡ್ ಕಂಟ್ರೋಲ್ ಮಾಡಿಕಂಡ್ ಪುನಃ ಬಿದ್ದ ಜಾಗಕ್ಕೆ ತಿರುಗಿ ಬಂದೊ, ಎಮರ್ಜೆನ್ಸಿಗೆ ತೇಳಿ ಬೋಟ್‌ಗಳ ಸೈಡ್‌ಲಿ ತೂಗು ಹಾಕಿಕಂಡ ದೊಡ್ಡ ದೊಡ್ಡ ಎರಡ್ ಗಾಳಿ ತುಂಬಿದ ರಬ್ಬರ್ ಟ್ಯೂಬ್‌ನ ಬಿದ್ದ ಜಾಗಲ್ಲಿ ನೀರಿಗೆ ಹಾಕಿದೊ. Mr. Raju Uncle ಬಹಳ

ಕಪ್ಪು ಪಟ್‌ಕಂಡ್ ಒಂದ್ ಕೈಲಿ ಆ ದಡೂತಿ ಹೆಂಗ್ಸ್‌ನ ಇನ್ನೊಂದ್ ಕೈಲಿ ಆ ಕೂಸ್‌ನ ಹಿಡ್ಕಂಡ್ ಮೇಲೆ ಎತ್ತಿ ಕಂಡ್ ಕಾಲಲೇ ಈಜ್ ಹೊಡ್ಕಂಡ್ ಕಷ್ಟಪಡ್‌ತಿತ್. ಅಷ್ಟೊತ್ತಿಗೆ ಆ ಬೋಟ್‌ನ ಡ್ರೈವರ್ ಬಹಳ ಬೇಗ ಆ ಹೆಂಗ್ಸನ ಕೈನ ಎಳ್ದ್ ಹಿಡ್ಕಂಡತ್. ಇನ್ನೊಂದ್ ಬೋಟ್‌ನವ ಆ ಕೂಸ್‌ನ ಕೈನ ಕಪ್ಪುಪಟ್ ಮೇಲಕ್ಕೆ ಎಳಕಂಡತ್. ಈ ಎರಡು ಜೀವಗಳ ಅವರ ಕೈಗೆ ಒಪ್ಪಿಸಿದ ಮೇಲೆ Guide Uncle ಸುಸ್ತ್ ಹೊಡ್ಕಂಡ್ ಒಂದ್ ದೋಣಿನ ಸೈಡ್‌ನ ಹಿಡ್ಕಂಡತ್. ಅಲ್ಲಿದ್ದ ಜನ ಈ ಗೈಡ್ ಅಂಕಲ್‌ನ ಮೇಲಕ್ಕೆ ಕೈ ಹಿಡ್ದ್ ಎಳ್‌ಕಂಡ್ ಆತ್. ಸದ್ಯ ಎಲ್ಲವರ ಪ್ರಾಣ ಉಳ್ತ್ ಬೋಟ್ ಒಳಗೆ ಕುದ್ದವೆಲ್ಲಾ ತಪ್ಪುಮಾಡಿ ಆದ ಮೇಲೆ ಮಾತಾಡದೆ ಉಸ್‌ರ್ ಬಿಗಿ ಹಿಡ್ಕಂಡ್ ಕುದ್ದಿದ್ದೊ, ಆ ಬೋಟ್‌ನವು ಇವರ್ನ ಹಂಗೇ ಜೋಪಾನ ಆಗಿ ಆ ಕಡೆ ಗಾರ್ಡ್‌ನ್ಸ್ ಕಡೆಗೆ ತಲಪಿಸಿ ಕೆರೆ ಹತ್ತಿಸಿದೊ. ಈತರ ಅನಾಹುತ ಆದಮೇಲೆ ಆ ಜನಕ್ಕೆ ಅಲ್ಲಿ ಮುಂದಕ್ಕೆ ಇರುವ ಮ್ಯೂಸಿಕಲ್ ಫೌಂಟಿನ್‌ನ ನೋಡಿಕೆ ಇಷ್ಟ ಆತ್‌ಲೆ. ಆಗ ಗೈಡ್ ಅಂಕಲ್ ಅವುಕೆಲ್ಲಾ ಧೈರ್ಯ ಹೇಳಿ ಆಗಿದ್ದ್ ಆಗಿ ಹೋತ್ ನಾನಿದ್ದದಕ್ಕೆ ಇವರಿಬ್ಬರ ಜೀವ ಉಳ್ತ್. ಆತ್ ಈಗ ಹೆದ್ರುದ್ ಬೇಡ ತ್ತೇಳಿ ಅಲ್ಲಿನ ಮ್ಯೂಸಿಕಲ್ ಫೌಂಟಿನ್‌ನ ತೋರ್ಸಿಕೆ ಕರಕಂಡ್ ಹೊತ್. ಅಲ್ಲಿಗೆ ಇವು ಹೋಗಿ ತಲಪಿಕೆ ಮೊದ್ಲೇ ಅಲ್ಲಿ ಸೆರೆ ಇಲ್ಲದಂಗೆ ಜನ ಸುತ್ತುಗಟ್ಟಿಕಂಡ್ ನಿಂತಿದ್ದೊ. ಅದು 20 ನಿಮಿಷಕೊಮ್ಮೆ ಸ್ಟಾಪ್ ಆಗಿ ಪುನಃ ಐದ್ ನಿಮಿಷ ಬುಟ್ಟ್ ಪುನಃ ಸುರು ಆದೆ. ಈ ಬೃಂದಾವನ ಗಾರ್ಡನ್ನಿಗೆ ಯಾರೇ ಹೋದ್ರೂ ಈ ಅಧ್ಭುತ ಮ್ಯೂಸಿಕಲ್ ಫೌಂಟಿನ್‌ನ ನೋಡಿಯೇ ಬರೊಕ್ಕು ಅದ್ ಡಗ್ಗ್ ಡಗ್ಗ್ ತ್ತೇಳಿ ಕಂಡ್ ಶುರ್ ಮಾಡಿರೆ ಅದರ ಸದ್ದ್‌ಗೆ ಸರಿಯಾಗಿ ಅಲ್ಲಿ ಸರಿಯಾಗಿ ಅದರ ಚೌಕಲಿ ಇದ್ದ ನೀರಿನ ಕಾರಂಜಿಗ ಎದ್ದ್ ಎದ್ದ್ ಕುಣಿಯಕೆ ಶುರು ಮಾಡಿರೆ, ಅದಕೆ ಸರಿಯಾಗಿ ಬೇರೆ ಬೇರೆ ಬಣ್ಣದ ಬೆಳಕ್ ಬದಲಾಕಂಡ್ ಒಳ್ಳೆ ಮಧುರವಾದ ಎಲೆಕ್ಟ್ರಾನಿಕ್ ಸೌಂಡನ ಮ್ಯೂಸಿಕ್ ಶುರು ಆದೆ. ಆಗ ಬಾಕಿ ಇದ್ದ ಬೇರೆ ಬೇರೆ ತರದ ಕಾರಂಜಿಗ ಲಯಬದ್ಧವಾಗಿ ಸೇರಿಕಂಡ್ ಮೇಲಕ್ಕೆ, ಕೆಳಗೆ ಹಂಗೇ ಎರಡ್ ಬದಿಗೆ ವಾಲಿಕಂಡ್, ಬೊಗ್ಗಿಕಂಡ್. ಇಡೀ ನೀರಿನ ಕಾರಂಜಿಗ ಗ್ರೂಪ್ ಡ್ಯಾನ್ಸ್ ಮಾಡಿಕೆ ಶುರು ಮಾಡ್ದೆ. ಅದರ ಒಂದೊಂದು ಸ್ಟೈಲ್‌ಗಳಿಗೂ ಒಂದೊಂದು ತರದ ಬಣ್ಣದ ಲೈಟ್‌ಗ ಚೇಂಜ್ ಆಗುತ ಇದ್ದದೆ. ಹಿಂಗೇ 20 ನಿಮಿಷಗಳ ಕಾಲ ಈ ಪೌಂಟಿನ್ ಕುಣಿಯಕೆ ಶುರುಮಾಡಿರೆ ಅಲ್ಲಿ ಸೇರ್ದ ಜನ ಒಂದ್ ಚೂರ್ ಗಲಾಟೆ ಮಾಡದೆ ಕಣ್ಣ್ ರೆಪ್ಪೆ ಮುಚ್ಚದೆ ನೋಡಿ ಖುಷಿ ಪಟ್ಟವೆ. ಇಂಥ ಒಂದ್ ಭವ್ಯವಾದ ಕಾರಂಜಿ ಭಾರತದೇಶಲಿ ಬೇರೆ ಎಲ್ಲೂ ಇಲ್ಲೆ ಕಂಡದೆ.

ಗಂಟೆ 9½ ಆಕೆ ಆತ್. ಎಲ್ಲವ್ರೂ ಇದನೆಲ್ಲಾ ನೋಡಿ ಕುಷಿ ಪಟ್ಟರೂ ಈ ಗೈಡ್‌ನ ಮಾತ್ ಕೇಳದೆ ಒಂದ್ ದುರಂತ ಮಾಡಿಕಂಡದಕ್ಕೆ ಮೌನವಾಗಿಯೇ ವಾಪಾಸ್ಸ್ ನಡಕಂಡ್ ಬಂದ್ ಬಸ್ಸಿಗೆ ಹತ್ತಿಕುದ್‌ಕಂಡೊ.

ಬಸ್ K.R.S. ಗೇಟ್ ಬುಟ್ ಹೊರಟರೂ ಯಾರೊಬ್ಬರದೂ ಸದ್ ಇಲ್ಲೆ ಬಹುಶಃ ಕೆಲವಕೆ ಬೆಳೆಗ್ಗಿಂದ ತಿರುಗಾಡಿ ಸುಸ್ತ್ ಆಗಿದ್ದರೆ ಕೆಲವಕೆ ನಮ್ಮ ಒಟ್ಟಿಗೆ ಬಂದ ಆ ಅಮ್ಮ ಮತ್ತೆ ಅವರ ಕೂಸ್ ನೀರಗೆ ಬಿದ್ ಬುಟ್ಟ ಬೇಜಾರ್. ಹಂಗಾಗಿ ಎಲ್ಲವ್ರೂ ಸದ್ ಮಾಡದೆ ಒಬ್ಬೊಬ್ಬ ಕುದ್ದಿದ್ದ ಸೀಟ್‌ಗಳಿಗೆ ಒರಗಿ ಕಂಡ್ ನಿದ್ರೆ ಹೊಡೆಯಕೆ ಶುರುಮಾಡ್ದೊ. ಬಸ್ Palace Vew Lodge ಹತ್ರ ಬಂದ್ ನಿಂತತ್.

Mr ಮೆಹತ ಬಂದ್ Mr. Raju (Guide)ನ ಬೆನ್ ತಟ್ಟಿ ಎಲ್ಲರ ಪರವಾಗಿ ಕೃತಜ್ಞತೆ ಹೇಳ್ತ್. ಮತ್ತೆ ಆ ದಿನದ ಒಟ್ಟು ಖರ್ಚ್‌ನ ಲೆಕ್ಕ ಹಾಕಿ Mr. Raju ಕೈಗೆ ಹಣಕೊಟ್ಟೊ. ಮತ್ತೆ ಅದರ ಮೇಲೆ ಹೆಚ್ಚಿಗೆ 500ರೂಪಾಯಿಯ ಎರಡ್ ನೋಟ್‌ನ ಖುಷಿಯಾಗಿ ಕೊಟ್ಟು, ಅಚ್ಛಾ ರಾಜು ಭಯ್ಯಾ ಕಲ್ ಸುಬಾಕೊ ಸಾಢ್ ಬಜೆಕೊ ಇದರ್ ಮಿಲ್‌ನಾ ಹಮ್ ಸಬ್ ಬಂಡೀಪುರ್ ಜಾನಾ ಹೈ ಅಂತ ಹೇಳ್ತ್ ಅಷ್ಟೊತ್ತಿಗೆ ಆ ನೀರಿಗೆ ಬಿದ್ದಿದ್ದ ಡುಡುಮಿ ಹೆಂಗ್ಸ್ ಬಂದ್ ರಾಜು ಭಯ್ಯ ಯೇ ಪಕಡೋ ಯೇ ಮೇರಾ ಗಿಫ್ಟ್ ಹೈ, ತುಮ್ ನಹೀ ರಹತಾ ತೋ ಮೈ ಔರ್ ಮೇರಾ ಬಚ್ಚಾ ಬಚ್‌ತಾ ನಹೀ ತಾ ಹೇಳಿಕಂಡ್ ಅವಳ ಕೈ ಉಂಗರನ ಕೊಟ್ಟ್ ಅವನ ತಲೆನ ನೇವರಿಸಿ ತುಮ್ಹಾರೆಕೊ ಭಗವಾನ್ ಅಚ್ಛಾ ರಕೆಂಗೆ ತಾಹೇಳಿ ಆಶೀರ್ವಾದ ಮಾಡ್ತ್. ರಾಜು ಎಷ್ಟ್ ಬೇಡ ಬೇಡ ತಾ ಹೇಳ್ದ್‌ರು ಅವು ಒತ್ತಾಯ ಮಾಡಿ Mr ರಾಜುನ ಕೈ ಬೆರಳಿಗೆ ಆ ಉಂಗುರನ ತೊಡ್ಸಿಬುಟ್ಟತ್.

ರಾಜು ಖುಷೀಲಿ ಅವರ್ನ ಬೀಳ್ಕೊಟ್ಟ್ ಅಲ್ಲಿಂದ ನಡ್ದ್‌ಕಂಡೇ ತನ್ನ ಜೈನ್ ಲಾಡ್ಜ್ ಕಡೆಗೆ ಶಾರ್ಟ್‌ಕಟ್ ಗಲ್ಲಿಗಾಗಿ ಹೊರಟತ್.

(ಮುಂದ್‌ವರ್ದದೆ)

## ಕೊಡಗು ಸಂಗಾತಿ

ಓದಿರಣ್ಣಾ ಓದಿರೋ ಓದ ಬನ್ನಿರೋ
ನಮ್ಮ ಕೊಡಗು ಸಂಗಾತಿಯನ್ನು ಓದಬನ್ನಿರೋ

ಸುತ್ತಮುತ್ತ ಊರುಗಳಿಂದ ತಿಳಿದು ಬರುವ ಸುದ್ದಿಗಳನ್ನು
ಕೊಡಗಿನ ಜನಗಳಿಗೆ ಎತ್ತಿ ತೋರುವುದೋ

ಎತ್ತಿ ತೋರುವ ಕೊಡಗು ಸಂಗಾತಿಯನ್ನು ಪ್ರೀತಿಯಿಂದ
ಗೌಡ ಜನಾಂಗ ಒಂದು ಗೂಡಿ ನಡೆಸುತ್ತಿರುವರು

ಬಡವ್ರು ಶ್ರೀಮಂತ ಜನಗಳೆಲ್ಲ ಸುತ್ತಮುತ್ತ ಊರಿನಲ್ಲಿ
ಕೊಡಗು ಸಂಗಾತಿಗೆಂದು ಕಾಯುತ್ತಿರುವರೋ

ನಾಲ್ಕು ವರ್ಷಗಳಿಂದ ಕೊಡಗು ಸಂಗಾತಿಯ ಸಂಪಾದಕಿ
ಶೀಲಾಮಣಿ ಪ್ರಭಾಕರ ಮೈಸೂರಿನಿಂದ ಹೊರತರುತ್ತಿರುವರೊ

ಹಲವು ಮಂದಿ ಗೌಡ ಗಣ್ಯರೆಲ್ಲ ಒಂದಾಗಿ ಸೇರಿ
ಕೊಂಡು ಕೊಡಗು ಸಂಗಾತಿಗಾಗಿ ಶ್ರಮಿಸುತ್ತಿರುವರೋ

ಈ ನಮ್ಮ ಕೊಡಗು ಸಂಗಾತಿ ನೂರು ವರ್ಷ
ಬೆಳಗಲೆಂದು ನಾವೆಲ್ಲ ಸೇರಿ ಹರಸುತ್ತಿರುವೆವು

ಓದಿರಣ್ಣಾ ಓದಿರೋ ಓದ ಬನ್ನಿರೋ
ನಮ್ಮ ಕೊಡಗು ಸಂಗಾತಿಯನ್ನು ಓದ ಬನ್ನಿರೋ

– ಬಾರನ ವಂಶಿ ಬೋಪಯ್ಯ, ಐಗೂರು

ನುಡಿದರೆ ಎಂಜಲು ಹಾರದಂತಿರಬೇಕು ಇದು ಇಂದಿನ ವಚನ : ಯಾಲದಾಳು ಚಂದ್ರಕಲಾ

# ತಾಯ್ನಾಡಿಗಾಗಿ ತಮ್ಮನ್ನೇ ಅರ್ಪಿಸಿಕೊಂಡ ಕೊಡಗಿನ ಪುತ್ರರು

*ಭಾರತವು ಸದಾ ಸ್ಮರಿಸಿಕೊಳ್ಳುವ ಕಣ್ಮಣಿಗಳಿವರು. ಸೇನೆಗೆ ಶಿಸ್ತು ಹಾಗೂ ಗೌರವ ತಂದುಕೊಟ್ಟ ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ಹಾಗೂ ಕೆ.ಎಂ. ತಿಮ್ಮಯ್ಯ ಅವರ ಸೇವೆ ಸೈನ್ಯಕ್ಕೆ ಸದಾ ಮಾರ್ಗದರ್ಶನ.*

**ಸಿಪಾಯಿ ಮಂಗೇರಿರ ಮಾದಪ್ಪ :** 1947 ರಲ್ಲಿ ಪಾಕಿಸ್ಥಾನ ಹಾಗೂ ಭಾರತ ವಿಭಜನೆಯಾದ ಬಳಿಕ ಗಡಿ ವಿವಾದಕ್ಕೆ ಸಂಬಂಧಿಸಿದಂತೆ ನಡೆದ ಸಂಘರ್ಷದಲ್ಲಿ ಕೊಡಗಿನ ಮೊದಲ ಸಿಪಾಯಿ ಮಂಗೇರಿರ ಮಾದಪ್ಪ ಅವರು ಬಲಿದಾನ ಮಾಡಿದರು. ಮೂಲತಃ ಚೆಟ್ಟಿಮಾನಿ ಸಮೀಪದ ಪದಕಲ್ಲಿನವರಾಗಿದ್ದಾರೆ. ಇವರು ತಾ. 1-11-48 ರಂದು ಪ್ರಾಣತ್ಯಾಗ ಮಾಡಿದರು.

**ಎಂ.ಬಿ. ದೇವಯ್ಯ :** 1962 ರಲ್ಲಿ ಚೀನಾದ ವಿರುದ್ಧದ ಕಾರ್ಯಾಚರಣೆಯಲ್ಲಿ ಕೊಡಗಿನ ಯೋಧ ಗನ್ನರ್ ಎಂ.ಬಿ. ದೇವಯ್ಯ ಅವರು ವೀರ ಸಾವನ್ನಪ್ಪಿದರು. ಇವರು ಪೊನ್ನಂಪೇಟೆ ಸಮೀಪದ ಬೇಗೂರು ನಿವಾಸಿಯಾಗಿದ್ದರು. ಆ ಕಾರ್ಯಾಚರಣೆಯಲ್ಲಿ ಶತ್ರುವಿನ ಗುಂಡೇಟಿಗೆ ತಾ. 21-11-62 ರಂದು ದೇವಯ್ಯ ಅವರು ವೀರ ಸಾವನ್ನಪ್ಪಿದರು.

**ಸಿ.ಎನ್. ಅಯ್ಯಣ್ಣ :** 1965 ರಲ್ಲಿ ಪಾಕಿಸ್ಥಾನದ ವಿರುದ್ಧದ ಕಾರ್ಯಾಚರಣೆಯಲ್ಲಿ ಶತ್ರುಗಳ ಗುಂಡೇಟಿಗೆ ಎದೆಯೊಡ್ಡಿ ಸಿ.ಎನ್. ಅಯ್ಯಣ್ಣ ಅವರು ಬಲಿದಾನಗೈದರು. ಇವರು ಪಾರಾಣೆ ಸಮೀಪದ ಕಿರುಂದಾಡುವಿನ ನಿವಾಸಿಯಾಗಿದ್ದರು. ಆ ಕಾರ್ಯಾಚರಣೆಯಲ್ಲಿ ಅವರು ತಾ. 15-9-65 ರಂದು ಸಾವನ್ನಪ್ಪಿದರು.

**ಎ.ಎನ್. ಪೂವಪ್ಪ :** 1965 ರಲ್ಲಿ ಪಾಕಿಸ್ಥಾನದ ವಿರುದ್ಧದ ಕಾರ್ಯಾಚರಣೆಯಲ್ಲಿ ದಫೇದಾರ್ ಎಂ.ಎನ್. ಪೂವಪ್ಪ ಅವರು ಹುತಾತ್ಮರಾದರು. ನೆಲಜಿಯ ಮುಂಡಂಡ ಕುಟುಂಬಕ್ಕೆ ಸೇರಿದವರಾಗಿದ್ದಾರೆ ಆ ಕಾರ್ಯಾಚರಣೆಯಲ್ಲಿ ಶತ್ರು ಸೈನಿಕರ ಗುಂಡೇಟಿಗೆ ಅವರು ತಾ. : 15-9-65 ರಂದು ಹತರಾದರು.

**ಎನ್.ಎಸ್. ಕಾರ್ಯಪ್ಪ :** 1965 ರ ಪಾಕಿಸ್ಥಾನದ ವಿರುದ್ಧದ ಕಾರ್ಯಾಚರಣೆಯಲ್ಲಿ ಸಿಪಾಯಿ ಎನ್.ಎಸ್. ಕಾರ್ಯಪ್ಪ ಅವರು ಪ್ರಾಣತ್ಯಾಗ ಮಾಡಿದರು.ಇವರು ಬಿರುನಾಣಿ ಸಮೀಪದ ಪರಕಟಗೇರಿ ನಿವಾಸಿಯಾಗಿದ್ದರು..

**ಕೆ.ಎನ್. ಪೊನ್ನಪ್ಪ :** 1965 ರ ಪಾಕಿಸ್ಥಾನದ ವಿರುದ್ಧದ ಸಂಘರ್ಷದಲ್ಲಿ ನಾಯಕ್ ಕೆ.ಎನ್. ಪೊನ್ನಪ್ಪ ಅವರು ವೀರ ಮರಣವನ್ನಪ್ಪಿದರು. ಶತ್ರು ಪಾಳಯದವರ ಗುಂಡೇಟಿಗೆ ಬಲಿಯಾದ ಇವರು ಪೊನ್ನಂಪೇಟೆ ಸಮೀಪದ ಹಳ್ಳಿಗಟ್ಟು ಗ್ರಾಮದವರಾಗಿದ್ದರು.

**ಬಿ.ಎಂ. ಕಾವೇರಿಯಪ್ಪ :** 1971 ರ ಇಂಡೋ-ಪಾಕ್ ಕಾರ್ಯಾಚರಣೆಯಲ್ಲಿ ಸುಬೇದಾರ್ ಬಿ.ಎಂ. ಕಾವೇರಿಯಪ್ಪ ಅವರು ವೀರ ಸಾವನ್ನಪ್ಪಿದರು. ಕಡಂಗ ನಿವಾಸಿಯಾಗಿದ್ದ ಇವರು, ಶತ್ರು ಸೈನಿಕರ ಗುಂಡೇಟಿಗೆ ತಾ. 9-12-71 ರಂದು ಬಲಿಯಾದರು.

**ಎಸ್.ಆರ್. ಪಳಂಗಪ್ಪ :** 1971ರ ಇಂಡೋ-ಪಾಕ್ ಕಾರ್ಯಾಚರಣೆಯಲ್ಲಿ ಗನ್ನರ್ ಸಿರಕಜೆ ಆರ್. ಪಳಂಗಪ್ಪ ಅವರು ಹತರಾದರು. ಇವರು ಭಾಗಮಂಡಲ ಸಮೀಪದ ಚೆಟ್ಟಿಮಾನಿ ಗ್ರಾಮದವರಾಗಿದ್ದರು.

**ಎಂ.ಎಸ್. ಪೊನ್ನಣ್ಣ :** 1971 ರ ಇಂಡೋ-ಪಾಕ್ ಸಂಘರ್ಷದಲ್ಲಿ ಸಿಪಾಯಿ ಎಂ. ಎಸ್. ಪೊನ್ನಣ್ಣ ಅವರು ವೀರಸಾವನ್ನಪ್ಪಿದರು. ಇವರು ಗೋಣಿಕೊಪ್ಪಲು ಸಮೀಪದ ಅರುವತ್ತೊಕ್ಲು ಗ್ರಾಮದ ನಿವಾಸಿಯಾಗಿದ್ದರು.

**ಲೂಯಿಸ್ ವೇಗಸ್ :** 1971 ರ ಇಂಡೋ-ಪಾಕ್ ಸಂಘರ್ಷದಲ್ಲಿ ಗನ್ನರ್ ಲೂಯಿಸ್ ವೇಗಸ್ ಅವರು ಶತ್ರುಗಳ ಗುಂಡಿಗೆ ಬಲಿಯಾದರು. ಸಿದ್ದಾಪುರ ಸನಿಹದ ಸಂಪಿಗೆಕೊಲ್ಲಿ ಗ್ರಾಮದವರಾಗಿದ್ದ ಇವರು ತಾ. 5-12-71 ರಲ್ಲಿ ಅಸುನೀಗಿದರು.

**ಎನ್.ಎಂ. ಅಪ್ಪಚ್ಚು :** 1971ರ ಇಂಡೋ-ಪಾಕ್ ಕಾರ್ಯಾಚರಣೆಯಲ್ಲಿ ಸಿಪಾಯಿ ಎನ್.ಎಂ. ಅಪ್ಪಚ್ಚು ಅವರು ಶತ್ರು ಸೈನಿಕರ ಗುಂಡೇಟಿಗೆ ಪ್ರಾಣ ತ್ಯಾಗ ಮಾಡಿದರು. ಇವರು ಬಿಳುಗುಂದ ಗ್ರಾಮದವರಾಗಿದ್ದರು.

**ಹೆಚ್.ಎಸ್. ಮುತ್ತಣ್ಣ :** 1971ರ ಇಂಡೋ-ಪಾಕ್ ಕಾರ್ಯಾಚರಣೆಯಲ್ಲಿ ಹೆಚ್.ಎಸ್. ಮುತ್ತಣ್ಣ ಅವರು ಹುತಾತ್ಮರಾದರು. ಗೋಣಿಕೊಪ್ಪಲುವಿನ ಅರುವತ್ತೊಕ್ಲು ಗ್ರಾಮದವರಾಗಿದ್ದ ಇವರು ಶತ್ರುಗಳ ಗುಂಡೇಟಿಗೆ ತಾ. 13-12-71ರಂದು ಕೊನೆಯುಸಿರೆಳೆದರು.

**ಎಂ.ಬಿ. ಕುಶಾಲಪ್ಪ :** 1987 'ಆಪರೇಷನ್ ಮೇಘದೂತ್' ಕಾರ್ಯಾಚರಣೆಯಲ್ಲಿ ಗನ್ನರ್ ಮಾಚಿಮಾಡ ಬಿ. ಕುಶಾಲಪ್ಪ ಅವರು ಪ್ರಾಣ ಅರ್ಪಿಸಿದರು. ಸಿಯಾಚಿನ್ ಗ್ಲೇಸಿಯರ್ ಪ್ರದೇಶದಲ್ಲಿ ಶತ್ರುಗಳ ಗುಂಡಿಗೆ ತಾ. 25-9-87 ರಂದು ಸಾವನ್ನಪ್ಪಿದರು. ಇವರು ಬಾಳೆಲೆ ಸನಿಹದ ದೇವನೂರು ಗ್ರಾಮದವರಾಗಿದ್ದರು.

**ಪಿ.ಎಸ್. ರಾಮು :** 1989ರಲ್ಲಿ ಗಡಿ ಕಾಯುತ್ತಿದ್ದ ಸಂದರ್ಭ ಗನ್ನರ್ ಪಿ. ಎಸ್.ರಾಮು ಅವರು ಶತ್ರು ಪಾಳಯದವರ ಗುಂಡಿಗೆ ಬಲಿಯಾದರು. ವೀರಾಜಪೇಟೆ ಸಮೀಪದ ಹೆಗ್ಗಳದವರಾಗಿದ್ದ ಇವರು, ತಾ. 7-8-84ರಂದು ಅಂತಿಮ ಉಸಿರೆಳೆದರು.

**ಎಂ.ಪಿ. ಬೋಪಯ್ಯ:** 1987 'ಆಪರೇಷನ್ ಪವನ್ ಕಾರ್ಯಾಚರಣೆಯಲ್ಲಿ ಶ್ರೀಲಂಕಾದಲ್ಲಿ ಸಿಪಾಯಿ ಎಂ.ಪಿ. ಬೋಪಯ್ಯ ಅವರು ಮಡಿದರು.ಹುದಿಕೇರಿ ಸಮೀಪ ಹೈಸೊಡ್ಲೂರು ಗ್ರಾಮದವರಾಗಿದ್ದ ಇವರು, ಎಲ್‌ಟಿಟಿಇ ಉಗ್ರಗಾಮಿಗಳ ಗುಂಡಿಗೆ ತಾ. 29-11-87 ರಂದು ಬಲಿಯಾದರು.

**ಹೆಚ್. ವೈ. ವೆಂಕಟೇಶ್ :** 1988ರ ಶ್ರೀಲಂಕಾ ಕಾರ್ಯಾಚರಣೆಯಲ್ಲಿ ಸಿಪಾಯಿ ಹೆಚ್.ವೈ. ವೆಂಕಟೇಶ್ ಅವರು ಸಾವನ್ನಪ್ಪಿದರು. ಬಿಟ್ಟಂಗಾಲ-ನಾಂಗಾಲದವರಾಗಿದ್ದ ಇವರು; ಎಲ್‌ಟಿಟಿಇ ಉಗ್ರಗಾಮಿಗಳ ಗುಂಡಿಗೆ ತಾ. : 14-8-88 ರಂದು ಪ್ರಾಣತ್ಯಾಗ ಮಾಡಿದರು.

**ಕೆ.ಎ. ರಾಮಕೃಷ್ಣ :** 1988ರ ಶ್ರೀಲಂಕಾ ಕಾರ್ಯಾಚರಣೆಯಲ್ಲಿ ನಾಯಕ್ ಕೆ.ಎ. ರಾಮಕೃಷ್ಣ ಅವರು ವೀರ ಮರಣವನ್ನು ಹೊಂದಿದರು. ಚೇರಂಬಾಣೆ ಬಾಡಗ ಗ್ರಾಮದವರಾಗಿದ್ದವರು, ಉಗ್ರಗಾಮಿಗಳ ಗುಂಡಿಗೆ ತಾ. 20-10-88ರಂದು ಬಲಿಯಾದರು.

**ಪಿ.ಬಿ. ಕುಟ್ಟಪ್ಪ :** 1993ರಲ್ಲಿ ಆಪರೇಷನ್ ರೋಹಿನೋ ಕಾರ್ಯಾಚರಣೆಯಲ್ಲಿ ಹವಾಲ್ದಾರ್ ಪಿ.ಬಿ. ಕುಟ್ಟಪ್ಪ ಅವರು ವೀರಸಾವನ್ನಪ್ಪಿದರು. ಅಸ್ಸಾಂನ ನಾಗಲ್ಯಾಂಡ್ ಎಂಬಲ್ಲಿ ಇವರ ತಂಡ ತೆರಳುತ್ತಿದ್ದ ಸೇನಾ ವಾಹನವನ್ನು ಉಗ್ರಗಾಮಿಗಳು ಸ್ಫೋಟಿಸುವುದರ ಮೂಲಕ ತಾ. 9-4-93ರಂದು ಮಡಿದರು.

**ಸಿ. ಎಂ. ಸೋಮಯ್ಯ :** 1994ರ ಆಪರೇಷನ್ ರಕ್ಷಕ್ ಕಾರ್ಯಾಚರಣೆಯಲ್ಲಿ ಜಮ್ಮು ಮತ್ತು ಕಾಶ್ಮೀರದ ಅನಂತ್‌ನಾಗ್ ಎಂಬಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಲ್ಯಾನ್ಸ್‌ನಾಯಕ್ ಸಿ.ಎಂ. ಸೋಮಯ್ಯ ಅವರು ಶತ್ರುಗಳ ದಾಳಿಗೆ ಬಲಿಯಾದರು. ನಾಲ್ಕೇರಿ ಗ್ರಾಮದವರಾಗಿದ್ದ ಇವರು, ತಾ.14-7-94ರಂದು ಸಾವನ್ನಪ್ಪಿದರು.

**ಪಿ.ಎಸ್. ಶಂಭು :** 1991ರಲ್ಲಿ ಜಮ್ಮುವಿನಲ್ಲಿ ಉಗ್ರಗಾಮಿಗಳೊಂದಿಗೆ ನಡೆದ ಕಾಳಗದಲ್ಲಿ ಗ್ರೆನೈಡ್ ಸ್ಫೋಟದಲ್ಲಿ ನಾಯಕ್ ಪಿ.ಎಸ್. ಶಂಭು ಅವರು ವೀರ ಸಾವನ್ನಪ್ಪಿದರು. ಇವರು ಚೇರಂಬಾಣೆ ಸನಿಹದ ಬೆಂಗೂರು ನಿವಾಸಿಯಾಗಿದ್ದರು. ತಾ. 6-5-1991ರಲ್ಲಿ ಇವರು ಮೃತರಾದರು

**ಸಿ.ಆರ್. ಚಂದ್ರ :** 1995 ರಲ್ಲಿ ಜಮ್ಮುವಿನಲ್ಲಿ ಉಗ್ರಗಾಮಿಗಳ ಗುಂಡಿಗೆ ಲ್ಯಾನ್ಸ್‌ನಾಯಕ್ ಸಿ.ಆರ್.ಚಂದ್ರ ಅವರು ತಾ. 18-10-95 ರಂದು ಬಲಿಯಾದರು.

**ಜಿ.ಇ. ಉತ್ತಯ್ಯ :** 1996 ರ ಆಪರೇಷನ್ ಆರ್ಚಿಡ್ ಕಾರ್ಯಾಚರಣೆಯಲ್ಲಿ ನಾಯಬ್ ಸುಬೇದಾರ್ ಗೋವಿಂದಮ್ಮನ ಉತ್ತಯ್ಯ ಅವರು ವೀರ ಮರಣವನ್ನಪ್ಪಿದರು. ಮಡಿಕೇರಿ ಸಮೀಪದ ಅರುವತ್ತೊಕ್ಲು ವಿನವರಾಗಿದ್ದ ಇವರು ನಾಗಲ್ಯಾಂಡ್‌ನಲ್ಲಿ ಉಗ್ರಗಾಮಿಗಳು ಸ್ಫೋಟಿಸಿದ ಬಾಂಬ್‌ಗೆ ತಾ 20-2-96 ರಂದು ಮಡಿದರು. ಇಲ್ಲಿಯವರೆಗಿನ ಕಾರ್ಯಾಚರಣೆಯಲ್ಲಿ ಮಡಿದ ಯೋಧರ ಪಾರ್ಥಿವ ಶರೀರಗಳನ್ನು ಅಲ್ಲಲ್ಲಿಯೆ ಅಂತ್ಯ ಸಂಸ್ಕಾರ ನೆರವೇರಿಸಲಾಗುತ್ತಿತ್ತು.

**ಆರ್. ಜಿ. ಸತೀಶ್ :** 1999 ರಲ್ಲಿ ಶ್ರೀನಗರದ ಬಾರಮುಲ್ಲಾ ಎಂಬಲ್ಲಿ ಉಗ್ರಗಾಮಿಗಳ ಗುಂಡಿಗೆ ಆರ್. ಜಿ. ಸತೀಶ್ ಅವರು ಬಲಿ ಯಾದರು. ಇವರು ಹೆಬ್ಬಾಲೆ ಸನಿಹದ ಕಣಿವೆ ಗ್ರಾಮದವರಾಗಿದ್ದರು. ಆಪರೇಷನ್ ರಕ್ಷಕ್ ಕಾರ್ಯಾಚರಣೆಯಲ್ಲಿ ಪಾಲ್ಗೊಂಡಿದ್ದ ಇವರು, ತಾ. 10-1-99 ರಂದು ಅಸುನೀಗಿದರು. ಇವರ ಪಾರ್ಥಿವ ಶರೀರವನ್ನು ಕೊಡಗಿನ ಇತಿಹಾಸದಲ್ಲಿಯೇ ಮೊದಲ ಬಾರಿಗೆ ಸ್ವಗ್ರಾಮಕ್ಕೆ ತಂದು ಸಕಲ ಮಿಲಿಟರಿ ಗೌರವದಲ್ಲಿ ಅಂತ್ಯ ಸಂಸ್ಕಾರ ನೆರವೇರಿಸಲಾಯಿತು.

**ಸಿಂಗೂರು ಮೇದಪ್ಪ :** ಇತ್ತೀಚಿನ ಕಾರ್ಗಿಲ್ ಕಾರ್ಯಾಚರಣೆಯಲ್ಲಿ ಮಡಿದ ಕೊಡಗಿನ ಪ್ರಥಮ ಯೋಧ ಐಗೂರಿನ ಸಿಂಗೂರು ಮೇದಪ್ಪ ಅವರಾಗಿದ್ದರು. ತಾ : 31-5-99 ರಂದು ಅಸುನೀಗಿದ ಇವರ ಪಾರ್ಥಿವ ಶರೀರವನ್ನು ಸ್ವಗ್ರಾಕ್ಕೆ ತಂದು, ಸಕಲ ಸರಕಾರಿ ಹಾಗೂ ಮಿಲಿಟರಿ ಗೌರವಗಳೊಂದಿಗೆ ಅಂತ್ಯಸಂಸ್ಕಾರ ನೆರವೇರಿಸಲಾಯಿತು

**ಹೆಚ್ . ವಿ. ವೆಂಕಟ :** ಕಾರ್ಗಿಲ್ ಕಾರ್ಯಾಚರಣೆಯಲ್ಲಿ ಹುತಾತ್ಮರಾದ ವೆಂಕಟ ಅವರು ಗಡಿ ಭದ್ರತಾ ಪಡೆಯ ಯೋಧರಾಗಿದ್ದರು. ಇವರು 6-7-99 ರಂದು ಮೃತರಾದರು. ಮೂಲತಃ ಕೊಡಗಿನ ಪಾಲಿಬೆಟ್ಟದವರಾಗಿದ್ದ ಇವರ ಶರೀರವನ್ನು ಅವರ ಇತ್ತೀಚಿನ ಮನೆಯಾದ ಹಾಸನಜಿಲ್ಲೆಯ ಅಗ್ರಹಾರಕ್ಕೆ ತಂದು ಸಕಲ ಗೌರವಗಳೊಂದಿಗೆ ಅಂತ್ಯಸಂಸ್ಕಾರ ನೆರವೇರಿಸಲಾಯಿತು.

**ಪೆಮ್ಮಂಡ ಕಾವೇರಪ್ಪ :** ಕಾರ್ಗಿಲ್ ಕಾರ್ಯಾಚರಣೆಯಲ್ಲಿ ಹುತಾತ್ಮರಾದ 3ನೇ ಯೋಧರಾದ ಪೆಮ್ಮಂಡ ಕಾವೇರಪ್ಪ ಅವರು ಬಾರಾಮುಲ್ಲಾದಲ್ಲಿ ಶತ್ರುಗಳ ದಾಳಿಗೆ ಬಲಿಯಾದರು. ಇವರ ಮೃತ ದೇಹವನ್ನು ಅವರ ಸ್ವಗ್ರಹವಾದ ಮೈತಾಡಿಗೆ ತಂದು ಸಕಲ ಗೌರವದೊಂದಿಗೆ ಅಂತ್ಯಸಂಸ್ಕಾರ ನೆರವೇರಿಸಲಾಯಿತು.

**ವಿ.ಎಲ್. ಗಣೇಶ :** ಕಾರ್ಗಿಲ್ ಕಾರ್ಯಾಚರಣೆ ಸಂದರ್ಭ ಗಡಿ ಪಹರೆಯನ್ನು ಕಾಯುತ್ತಿದ್ದ ಸಂದರ್ಭ ವಿಷ ಜಂತುವೊಂದು ಕಚ್ಚಿ ವಿ.ಎಲ್. ಗಣೇಶ್ ಅವರು ಸಾವನ್ನಪ್ಪಿದರು. ಇವರ ಪಾರ್ಥಿವ ಶರೀರವನ್ನುಕೂಡ ಅವರ ಸ್ವಗೃಹವಾದ ಮೈತಾಡಿಗೆ ತಂದು ಸಕಲ ಗೌರವದೊಂದಿಗೆ ಅಂತ್ಯಸಂಸ್ಕಾರ ಮಾಡಲಾಯಿತು. ದೇಶಕ್ಕಾಗಿ ಪ್ರಾಣತ್ಯಾಗ ಮಾಡಿದ ಕೊಡಗಿನ 27ನೇ ಯೋಧ ಇವರಾಗಿದ್ದಾರೆ.

ತಾಯ್ನಾಡಿನ ರಕ್ಷಣೆಗಾಗಿ ಹೋರಾಡಿ ತಮ್ಮ ಪ್ರಾಣವನ್ನು ಅರ್ಪಿಸಿದ ಈ 27ಮಂದಿ ದೇಶಪ್ರೇಮಿಗಳ ಆದರ್ಶ ನಮ್ಮ ನಿಮ್ಮೆಲ್ಲರಿಗೆ ದಾರಿದೀಪವಾಗಿದೆ.

---

## ಮದ್ವೆ ಕಾರ್ಯಗ

ಕುಂಬಳದಾಳ್ ಗ್ರಾಮದ ಕುಂಜಿಲನ ರಾಮಯ್ಯನವ್ರ ಮಗ್ಳು ಸ್ವಾತಿಗೂ ಮತ್ತೆ ಸುಳ್ಯದ ಅಮರ ಮುದುನ್ನೂರು ಗ್ರಾಮದ ಹಲ್ದಡ್ಕ ಶೇಷಪ್ಪ ಗೌಡ್ರ ಮಂಜ ಸುಧಾಕರಂಗೂ ತಾರೀಖ್ 24-4-2000 ರ್ಲಿ ಗೂಡೆನ ಮನೆಲಿ ಮದ್ವೆ ಕಳ್ತ್

* * *

ಮದೆ ನಾಡ್ ಗ್ರಾಮದ ನೆರಿಯನ ಸೊಮಯ್ಯನವ್ರ ಮಂಜ ಡಾ. ಪ್ರವೀಣ್‌ಗೂ ಮತ್ತೆ ಶಿವಮೊಗ್ಗ ತೀರ್ಥಹಳ್ಳಿ ತಾಲೋಕು ಕೃಷ್ಣಪ್ಪ ವಕೀಲರ ಮಗ್ಳು ಡಾ.ಅಶ್ವಿನಿಗೂ 15-5-2000ರ್ಲಿ ಶಿವಮೊಗ್ಗದ ಆದಿ ಚುಂಚನಗಿರಿ ಸಭಾಂಗಣಲಿ ಬಾರಿ ಗೌಜಿಯಾಗಿ ನಡ್ತ್.

* * *

ಬೆಂಗಳೂರ್ ನಿವಾಸಿ ಕುಲ್ಲಚೆಟ್ಟಿರ ನಂಜಪ್ಪನವ್ರ ಮಗಳು ಜ್ಯೋತಿಗೂ ಮತ್ತೆ ಪುತ್ತೂರು ತಾಲೋಕು ಕೆದಂಬಾಡಿ ಬಾಬಣ್ಣ ಗೌಡರ ಮಂಜ ಗೋಪಾಲ ಕೃಷ್ಣಂಗೂ ತಾರೀಖ್ 28-5-2000ರ್ಲಿ ಬೆಂಗಳೂರಿನ ಜಸ್ಮಾ ಭವನಲಿ ಕಳ್ತ್

* * *

ಕುಂಬಳದಾಳ್ ಗ್ರಾಮದ ಕುಂಜಿಲನ ರಾಮಯ್ಯನವ್ರ ಮಂಜ ರಾಜಂಗೂ ಮತ್ತೆ ಸಕಲೇಶ್‌ಪುರ ಹೋಬಳಿ ದೇವರುಂದ ಗ್ರಾಮದ ಮಂಜಪುರ ದಿ. ಭೀಮಯ್ಯನವ್ರ ಮಗ್ಳು ದೇವಕಿಗೂ 15-5-2000 ರ್ಲಿ ಹೈದನ ಮನೆಲಿ ಕಳ್ತ್.

# ಶ್ರೀ ಲಕ್ಷ್ಮೀ ವೆಂಕಟೇಶ್ವರ ಮಹಾತ್ಮೆ

ಹಿಂದಿನ ಸಂಚಿಕೆಯಿಂದ

ಆಕಾಶ ರಾಜನು ಅಮಿತ ಸಂತೋಷ ಭರಿತನಾಗಿ ಆ ಹೆಣ್ಣು ಮಗುವನ್ನು ತನ್ನ ಹೆಂಡತಿಯಾದ ಧರಣೀದೇವಿಗೆ ಕೊಟ್ಟನು. ಆ ಕೂಸಿಗೆ ಪದ್ಮಾವತಿಯೆಂದು ಹೆಸರಿಟ್ಟು ಬೆಳೆಸಿ ದೊಡ್ಡವಳನ್ನಾಗಿ ಮಾಡಿದರು.

ಕೆಲವು ಕಾಲಾನಂತರ ಯುಕ್ತ ವಯಸ್ಸು ಬಂತು. ಆ ಕನ್ಯೆಯು ನಂದನವನದಲ್ಲಿ ಸಖಿಯರೊಡನೇ ವ್ಯಹರಿಸುತ್ತಿದ್ದಾಗ ನಾರದ ಮಹರ್ಷಿ ಬಂದು ಪದ್ಮಾವತಿಯ ಹಸ್ತರೇಖೆಗಳನ್ನು ನೋಡಿ "ನಿನಗೆ ಶ್ರೀಮನ್ನಾರಾಯಣನೇ ಪತಿಯಾಗುವನು" ಎಂದು ಹೇಳಿದನು.

ಒಂದು ದಿನ ಶ್ರೀ ಮನ್ನಾರಾಯಣನು ಅಶ್ವಾರೂಢನಾಗಿ (ಕುದುರೆ) ಬೇಟೆಗೆ ಹೋದಾಗ ಅಲ್ಲಿ ಒಂದು ಮದಿಸಿದ ಆನೆ ಕಾಣಿಸಿತು- ಅದನ್ನು ಹಿಂಬಾಲಿಸಿ ಹೋಗುತ್ತಿರಲು ಆ ಗಜವು ಪದ್ಮಾವತಿಯು ವಿಹರಿಸುತ್ತಿದ್ದ ವನದಲ್ಲಿ ಪ್ರವೇಶಿಸಿತು. ಅದನ್ನು ನೋಡಿ ಪದ್ಮಾವತಿ ಭಯ ಭೀತಳಾದಳು. ಆಗ ಮಹಾವಿಷ್ಣುವು ಆನೆಯನ್ನು ಅಲ್ಲಿಂದ ಅಟ್ಟಿ ಪದ್ಮಾವತಿಯ ರೂಪಲಾವಣ್ಯ ಗಳನ್ನು ನೋಡಿ ಮುಗ್ಧನಾಗಿ ವಿವಾಹ ಮಾಡಿಕೊಳ್ಳಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡನು. ಆನೆಯನ್ನು ಅಟ್ಟಿ ತಮ್ಮನ್ನು ರಕ್ಷಿಸಿದನೆಂದು ಅವರು ಕುದುರೆಯ ಮೇಲೆ ಏರಿ ಬಂದ ಮಹಾ ವಿಷ್ಣುವನ್ನು ಮನಸಾರೆ ಪ್ರಾರ್ಥಿಸಿದರು.

ಆಗ ಮಹಾವಿಷ್ಣುವು ಸಖಿಗಳನ್ನು ಸಮೀಪಿಸಿ "ಈಕೆ ಯಾರು? ಈಕೆಯ ವೃತ್ತಾಂತವನ್ನು ಸ್ವಲ್ಪ ತಿಳಿಸಬೇಕು" ಎಂದು ಕೇಳಲು. ಅವರು ವಿವರಗಳನ್ನು ತಿಳಿಸಲು ನಾನು ಇವಳನ್ನೇ ಮದುವೆಯಾಗುವೆನೆಂದು ಹೇಳಿದನು. ವೇದಾವತಿಯು ಶ್ರೀಮನ್ನಾರಾಯಣನನ್ನು ವರಿಸಿದೆನೆಂದು. ರಾವಣಾಸುರನಿಗೆ ಹೇಳಲು ರಾವಣನು "ತನ್ನನ್ನೇ ಮದುವೆ ಮಾಡಿಕೋ" ಎಂದು ತನ್ನ ದುಷ್ಟವಾದ ಅಭಿಪ್ರಾಯವನ್ನು ಆಕೆಗೆ ತಿಳುಹಿಸಿದನು. ರಾವಣಾಸುರನು ವೇದಾವತಿಯನ್ನು ಬಲಾತ್ಕರಿಸಲು ಪ್ರಯತ್ನಿಸಿ ದಾಗ ಅವಳು ನನ್ನಂತಹ ಹೆಂಗಸಿನಿಂದಲೇ ನಿನ್ನ ವಂಶವು ನಾಶವಾಗುವುದು" ಎಂದು ಶಾಪವನ್ನು ಕೊಟ್ಟು ಅಗ್ನಿ ಪ್ರವೇಶ ಮಾಡಿದಳು. ಆಗ ಅಗ್ನಿ ದೇವನು ಅವಳನ್ನು ಕಾಪಾಡಿ ಅಭಯವನ್ನು ಕೊಟ್ಟು ತನ್ನ ಮನೆಗೆ ಕರೆದುಕೊಂಡು ಹೋದನು.

ರಾವಣಾಸುರನು ಸೀತೆಯನ್ನು ಅಪಹರಿಸಿಕೊಂಡು ಹೋಗುವಾಗ ಅಗ್ನಿದೇವನು ರಾವಣನಿಗೆ ನಂಬಿಕೆಯನ್ನುಂಟು ಮಾಡಿ "ಸೀತೆಯು ನನ್ನಲ್ಲಿರುವಳು" ನೀನು ಅಪಹರಿಸಿದ್ದು ಸೀತೆಯಲ್ಲ" ಎಂದು ಹೇಳಿ, ಸೀತೆಯ ರೂಪದಲ್ಲಿದ್ದ ವೇದಾವತಿಯನ್ನು ರಾವಣನಿಗೆ ಕೊಟ್ಟು ನಿಜವಾದ ಸೀತೆಯನ್ನು ತಾನು ಕರೆದು ಕೊಂಡು ಹೋದನು.(ಅಗ್ನಿದೇವನು) ರಾಮಲಕ್ಷ್ಮಣರಿಗೆ ವೇದಾವತಿಯನ್ನು ಕುರಿತು ದೇವಿಯನ್ನು ಕುರಿತು ವಿಚಾರಗಳನ್ನು ತಿಳಿಸುತ್ತ ಸೀತೆಯನ್ನು ರಾಮನಿಗೆ ಒಪ್ಪಿಸುತ್ತಾ ಇಬ್ಬರೂ ನಿಷ್ಕಲ್ಮಷರೇ ಎಂದು ಹೇಳಿದನು. ಶ್ರೀರಾಮನು ಏಕ ಪತ್ನಿ ವ್ರತನಾಗಿರುವುದರಿಂದ ಬರಲಿರುವ ಅವತಾರದಲ್ಲಿ ವೇದಾವತಿಯನ್ನು ತಾನು ಮದುವೆ ಯಾಗುವೆನೆಂದು ಹೇಳಿದನು. ಆ ವೇದವತಿಯೇ ಪದ್ಮಾವತಿಯಾಗಿ ಹುಟ್ಟಿರುವಳೆಂದು ಭಗವಂತನು ಬಕುಳಾದೇವಿಗೆ ವೃತ್ತಾಂತವನ್ನು ಹೇಳಿದನು.

ಈ ವಿಚಾರವನ್ನು ತಿಳಿದು ಬಕುಳಾದೇವಿಯು ಆಕಾಶ ರಾಜನಲ್ಲಿಗೆ ಬರುತ್ತಿರಲು ಪದ್ಮಾವತಿಯ ಶಖಿಯರು ಎದುರಾದರು ಎಲ್ಲರೂ ಕೂಡಿ ರಾಜ ಭವನವನ್ನು ಪ್ರವೇಶಿಸಿದರು. ಆಕಾಶ ರಾಜನು ಪದ್ಮಾವತಿಯ ವಿವಾಹವನ್ನು ಕುರಿತು ಮಾತನಾಡಲು ಬೃಹಸ್ಪತಿಯನ್ನು ಕರೆದು ಪದ್ಮಾವತಿ ವೆಂಕಟೇಶ್ವರರ ವಿವಾಹವನ್ನು ಕುರಿತು ಆಕಾಶರಾಜನೂ ಧರಣೀದೇವಿಯೂ ಮಾತನಾಡುತ್ತಿದ್ದರು.

ಬಕುಳಾದೇವಿಯನ್ನು ನಾರಾಯಣ ವನವನ್ನು ಪಾಲಿಸುವ ಆಕಾಶರಾಜನಲ್ಲಿಗೆ ಕಳುಹಿಸಿ ಶ್ರೀವೆಂಕಟೇಶನು ಕೊರವಂಜಿಯ ವೇಷವನ್ನು ಧರಿಸಿ ನಾರಾಯಣ ಪುರದಲ್ಲಿದ್ದ ಜನಗಳಿಗೆ ಕಣಿ ಹೇಳುತ್ತಿದ್ದನು. ಕಣಿ ಹೇಳುತ್ತಿದ್ದ ಕೊರವಂಜಿಯನ್ನು ಸಖಿಯರು ನೋಡಿದರು. ಅವಳು ಹೇಳುವ ಮಾತುಗಳು ಸತ್ಯವಾಗಿದೆ ಎಂದು ಪದ್ಮಾವತಿಗೆ ಸಖಿಯರು ತಿಳಿಸಿದರು. ಪದ್ಮಾವತಿಯ ತಾಯಿ ಧರಣೀದೇವಿ ಸಖಿಯರಿಗೆ "ಕಣಿ ಹೇಳುವ ಕೊರವಂಜಿಯನ್ನು ಕರೆದುಕೊಂಡು ಬನ್ನಿರಿ" ಎಂದು ಹೇಳಲು ಸಖಿಯರು ಹೋಗಿ ಕೊರವಂಜಿಯನ್ನು ಕರೆದರು. ಕೊರವಂಜಿಯನ್ನು ನೋಡಿದ ಕೂಡಲೇ ಪದ್ಮಾವತಿಗೆ ಕಣಿ ಹೇಳಿಸಿಕೊಳ್ಳಬೇಕೆಂಬ ಇಚ್ಛೆಯಾಯಿತು. ಕೊರವಂಜಿಯು "ನಾನು, ಎಲ್ಲವನ್ನು ಸತ್ಯವಾಗಿ ಹೇಳುವೆನು. ಸ್ವಲ್ಪವೂ ಅಸತ್ಯವಿರಲಾರದು. ನನಗೆ ಸಮಾನರು ಯಾರು ಇಲ್ಲ ಎಂದು ಹೇಳಲು ಸಖಿಯರು ಪದ್ಮಾವತಿಯ ವಿಷಯವನ್ನು ಸತ್ಯವಾಗಿ ಹೇಳಿದರೆ ನಿನ್ನ ದರಿದ್ರವು ತೀರಿ ಹೋಗುವುದು" ಎಂದು ಕೊರವಂಜಿಗೆ ಹೇಳಿದರು. ಅವಳು ಕಣಿ ಹೇಳ ತೊಡಗಿದಳು. ಬಕುಳಾದೇವಿಯು, ಪದ್ಮಾವತಿಯ ತಾಯಿಯಾದ ಧರಣೀ ದೇವಿಯೊಡನೆ ಶ್ರೀನಿವಾಸನ ವಿವಾಹವನ್ನು ಕುರಿತು ಪ್ರಸ್ತಾಪಿಸಿದಳು. ಅದಕ್ಕೆ ಅವರು ಆಲೋಚಿಸಿ ನಿರ್ಣಯಿಸುವುದಕ್ಕೆ ಪರಸ್ಪರ ಒಪ್ಪಿಕೊಂಡರು. ಆಕಾಶರಾಜನು "ಬೃಹಸ್ಪತಿಯನ್ನೂ ಶುಕ ಮಹರ್ಷಿಯನ್ನೂ ಕರೆದುಕೊಂಡು ಬಾ" ಎಂದು ತಮ್ಮನಾದ ತೊಂಡಮಾನನ್ನು ಕಳುಹಿಸಿ ಕರೆಯಿಸಿ ಪದ್ಮಾವತಿಯ ವಿವಾಹವನ್ನು ಕುರಿತು ಅವರೊಡನೆ ಆಲೋಚಿಸಿ ಶ್ರೀನಿವಾಸನಿಗೆ ಪದ್ಮಾವತಿ ಯನ್ನು ಕೊಟ್ಟು ವಿವಾಹವನ್ನು ಮಾಡಲು ಸಮ್ಮತಿಸಿದರು.

ಬೃಹಸ್ಪತಿ ಮತ್ತು ಮಹರ್ಷಿಗಳು ಸೇರಿ ತಾರ ಬಲ ಚಂದ್ರಬಲಗಳನ್ನು ನೋಡಿ ಒಂದು ಶುಭ ಮುಹೂರ್ತವನ್ನು ನಿಶ್ಚಯ ಮಾಡಿ ಆಕಾಶ ರಾಜನಿಗೆ ತಿಳಿಸಲು ಆಕಾಶ ರಾಜನು, ಶುಕಮಹರ್ಷಿಯೊಡನೆ ಶುಭ ಪತ್ರಿಕೆಯನ್ನು ಶ್ರೀನಿವಾಸನಿಗೆ, ಕಳುಹಿಸಬೇಕು" ಎಂದು ಬೃಹಸ್ಪತಿ ಹೇಳಲು ಕೇಳಿ ಶುಕಮಹರ್ಷಿಯು ಲಗ್ನಪತ್ರಿಕೆಯನ್ನು ಶ್ರೀನಿವಾಸನಿಗೆ. ಶ್ರೀನಿವಾಸನೂ ಬಕುಳಾ ದೇವಿಯೂ ಈ ವಿವಾಹದ ಖರ್ಚುಗಳಿಗೆ ಧನ ಸಹಾಯ

ಹೇಡಿಯಾಗಿ ಅಡಗುವುದಕ್ಕಿಂತ ಹೋರಾಡಿ ಸಾಯುವುದೇ ಮೇಲು

ಮಾಡುವವರು ಯಾರೆಂದು ಆಲೋಚಿಸುತ್ತಿರಲು ಶ್ರೀನಿವಾಸನು ಬ್ರಹ್ಮ. ಈಶ್ವರ ಮೊದಲಾದ ದೇವತೆಗಳನ್ನು ಕರೆ ಕಳುಹಿಸಿ ಕೇಳಬೇಕೆಂದು ಯೋಚಿಸಿ ಅವರನ್ನು ಧ್ಯಾನಿಸಲು ಎಲ್ಲರೂ ಪ್ರತ್ಯಕ್ಷರಾದರು. ಶುಭಕಾರ್ಯಕ್ಕೆ ಕುಬೇರನಿಂದ ಸಾಲವನ್ನು ಪಡೆದು ಈ ಕಾರ್ಯವನ್ನು ಮಾಡಬೇಕೆಂದು ನಿರ್ಣಯಿಸಿ, ಕುಬೇರನಿಂದ ಸಾಲವನ್ನು ಕೇಳಿದರು. ಕುಬೇರನು ಶ್ರೀನಿವಾಸನು ಕೇಳಿದ ಧನವನ್ನು ಕೊಡಲು ಸಮ್ಮತಿಸಿದ್ದರಿಂದ ಅದಕ್ಕೆ ಸಾಲದ ಪತ್ರವನ್ನು ಬರೆದು ಅದಕ್ಕೆ ಬಡ್ಡಿಯನ್ನು ಕಲಿಯುಗಾಂತದವರೆಗೆ ಕೊಡಲೂ, ಕಡೆಯಲ್ಲಿ ಅಸಲನ್ನು ಪೂರ್ತಿಯಾಗಿ ಕೊಡಲು ಸಮ್ಮತಿಸಿ ಪತ್ರವನ್ನು ಬರೆದು ಕೊಟ್ಟರು.

ಇದಕ್ಕೆ ಸಾಕ್ಷಿಯಾಗಿ ಬ್ರಹ್ಮ, ಮಹೇಶ್ವರರು ಇದ್ದರು, ಕುಬೇರನು ಬೇಕಾದ ಧನವನ್ನು ಬಂಗಾರವನ್ನೂ ಶ್ರೀನಿವಾಸನಿಗೆ ಕೊಟ್ಟನು. ವರಾಹಸ್ವಾಮಿ ಪರ್ವತದಿಂದ ಬ್ರಹ್ಮ, ಈಶ್ವರ, ಬಕುಳಾದೇವಿಯರು ಆಶ್ರಮವಾಸಿಗಳು ದೇವಗಂಧರ್ವ ಕಿನ್ನರರೆ ಆದಿಯಾಗಿ ನಾರಾಯಣ ಪುರಕ್ಕೆ ಹೊರಟರು. ಆಕಾಶರಾಜನು ತನ್ನ ಪತ್ನಿಯಾದ ತಾರಣೀದೇವಿಯನ್ನು ಕರೆದು ವಧುವನ್ನು ಸಿಂಗರಿಸಿ ವಿವಾಹಕ್ಕೆ ಅಣಿಮಾಡುವಂತೆ ಹೇಳಿದನು. ಬ್ರಹ್ಮದೇವ ಮಹೇಶ್ವರ, ಮೂವತ್ತುಮೂರು ಕೋಟಿ ದೇವತೆಗಳು ಮತ್ತು ಮಹರ್ಷಿಗಳೊಡನೆ ಕೂಡಿ ಮದುಮಗನ ದಿಬ್ಬಣ ಬಂತು. ಇದನ್ನು ನೋಡಿ ಆಕಾಶರಾಜನು ಬಹಳ ಹರ್ಷಿತನಾಗಿ ತನ್ನ ಮಗಳನ್ನು ಕರೆದು ತೋರಿಸಿದನು. ಆಕೆಯೂ ಇದನ್ನು ನೋಡಿ ಆನಂದಾತಿರೇಕದಿಂದ ರೋಮಾಂಚಿತಳಾದಳು. ಓಲಗ ಮಂಗಳ ವಾದ್ಯಗಳು ಭೋರ್ಗರೆಯುತ್ತಿರಲು ದಿಬ್ಬಣವು ನಾರಾಯಣ ಪುರವನ್ನು ಪ್ರವೇಶಿಸಿತು. ಸಮಸ್ತ ದೇವತೆಗಳು ಮತ್ತು ಪುರಜನರ ಸಮಕ್ಷಮದಲ್ಲಿ ಭೂಲೋಕವು ದೇವಲೋಕವೊ ಎಂಬಂತೆ ಕಾಣಿಸಲು, ಭೂಲೋಕದ ಜನರು ಅಮಿತಾನಂದ ಭರಿತರಾಗಿರಲು ಶ್ರೀನಿವಾಸನು ಶುಭ ಮೂರ್ತದಲ್ಲಿ ಪದ್ಮಾವತಿಯನ್ನು ಮದುವೆಯಾದನು. ವೆಂಕಟೇಶ್ವರ ಪದ್ಮಾವತಿಯರಿಗೆ ಯಜ್ಞ ಹೋಮವನ್ನು ಶುಕ ಮಹರ್ಷಿ ಬೃಹಸ್ಪತಿಯರು ಮಾಡಿದರು. ವಿವಾಹವು ಮುಗಿದ ಮೇಲೆ ಲಕ್ಷ್ಮೀದೇವಿಯು ಕೊಲ್ಲಾಪುರಕ್ಕೆ ಹೊರಟು ಹೋದಳು. ನೂತನ ದಂಪತಿಗಳು ಉಲ್ಲಾಸವಾಗಿ ಅಗಸ್ತ್ಯಾಶ್ರಮದಲ್ಲಿ ಕಾಲವನ್ನು ಕಳೆಯುತ್ತಿರಲು ಆಕಾಶರಾಜನು ಸ್ವರ್ಗಸ್ತನಾದನು. ರಾಜ್ಯಾಧಿಕಾರಕ್ಕಾಗಿ ಅವನ ಮಗನಾದ ವಸುದಾನನು ತಮ್ಮನಾದ ತೊಂಡಮಾನನು ಯುದ್ಧಕ್ಕೆ ಪ್ರಾರಂಭಿಸಿದರು. ರಕ್ತಪಾತವನ್ನು ಸಹಿಸದ ಶ್ರೀನಿವಾಸನು ಸಂಧಿಯನ್ನು ಮಾಡಿಸಲು ರಣರಂಗಕ್ಕೆ ಬಂದನು ತೊಂಡಮಾನನ ಬಾಣವು ಶ್ರೀನಿವಾಸನಿಗೇ ಬೀಳಲು ಶ್ರೀನಿವಾಸನನ್ನು ಸಮೀಪಿಸಿದರು. ಆಗ ಶ್ರೀನಿವಾಸನು ಚೇತರಿಸಿಕೊಂಡು ಬಂದು ಎರಡು ಪಕ್ಷದವರಿಗೂ ಸಂಧಿಯನ್ನು ಮಾಡಿಸಿದನು. ರಾಜ್ಯವನ್ನು ಸರಿಸಮನಾಗಿ ಭಾಗವನ್ನು ಮಾಡಿ ಸಮ್ಮತಿಸುವಂತೆ ಮಾಡಿದನು.

ಶ್ರೀನಿವಾಸನು ಅಭಿಷ್ಟವನ್ನು ನೆರವೇರಿಸಲು ತೊಂಡಮಾನನು ಶೇಷಾಚಲದಲ್ಲಿದ್ದು ವಲ್ಮೀಕವಿದ್ದ ಕಡೆ ಆನಂದ ನಿಲಯವನ್ನು ನಿರ್ಮಿಸಿದನು. ಒಂದು ಶುಭ ದಿನದಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಯು ಪದ್ಮಾವತೀ ಸಮೇತವಾಗಿ ಬ್ರಹ್ಮದೇವನನ್ನು ರಥದ ಸಾರಥಿಯಾಗಿ ಮಾಡಿಕೊಂಡು ಶೇಷಾಚಲಕ್ಕೆ ಹೊರಟನು. ಅವರಿಬ್ಬರೂ ಆನಂದನಿಲಯದ ಗರ್ಭಗೃಹದಲ್ಲಿದ್ದ ಆಸನದಲ್ಲಿ ಆಸೀನರಾದರು. ಬ್ರಹ್ಮದೇವನ ಇಚ್ಚೆಯಂತೆ ಶ್ರೀನಿವಾಸನು ಶೇಷಾಚಲದಲ್ಲಿಯೇ ವಾಸಮಾಡುತ್ತಾ ಕಲಿಯುಗಾಂತದವರೆಗೆ ಭಕ್ತರನ್ನು ರಕ್ಷಿಸುತ್ತಾ ಇರುವನು.

ಶ್ರೀ ಮಹಾಲಕ್ಷ್ಮಿಯು ಇಲ್ಲದರಿಂದ ಶ್ರೀನಿವಾಸನು ಚಿಂತಾಕ್ರಾಂತನಾದನು. ಕುಬೇರನ ಬಡ್ಡಿ ಕೊಡುವುದು ಹೇಗೆ ಎಂದು ಕಳವಳ ಪಡುತ್ತಿದ್ದ ಶ್ರೀನಿವಾಸನನ್ನು ನೋಡಿ ಪದ್ಮಾವತಿಯು ಮಹಾಲಕ್ಷ್ಮಿಯನ್ನು ಕರೆ ಕಳುಹಿಸು" ಎಂದು ಸಲಹೆಯನ್ನು ಕೊಟ್ಟಳು. ಶ್ರೀನಿವಾಸನು ಶ್ರೀ ಮಹಾಲಕ್ಷ್ಮಿಯನ್ನು ಕರೆದುಕೊಂಡು ಬರಲು ಶಂಖ, ಚಕ್ರ, ಪೀತಾಂಬರಗಳನ್ನು ಧರಿಸಿ ಗರುಢಾರೂಢನಾಗಿ ಕೊಲ್ಲಪುರಕ್ಕೆ ಹೋಗಲು ಲಕ್ಷ್ಮೀದೇವಿಯು ಕಾಣಲಿಲ್ಲ. ಅದಕ್ಕೆ ಶ್ರೀನಿವಾಸನು ಚಿಂತಿಸಿ ದೇವಲೋಕದಿಂದ ಸಹಸ್ರಪತ್ರ ಕಮಲವನ್ನು ದೇವನಿಂದ ತರಿಸಿದನು. ಸಹಸ್ರ ಪತ್ರ ಕಮಲ ಪುಷ್ಪವನ್ನು ಪದ್ಮ ಸರೋವರದಲ್ಲಿ ಮುಳುಗಿಸಿ ಅದೇ ತೀರದಲ್ಲಿ ಲಕ್ಷ್ಮೀ ದೇವಿಯು ಶ್ರೀನಿವಾಸನು ತಪಸ್ಸನ್ನು ಮಾಡಲು ಆಗ ಲಕ್ಷ್ಮೀದೇವಿಯು ಆ ಸಹಸ್ರ ಪತ್ರ ಕಮಲಪುಷ್ಪದಲ್ಲಿ ಉದ್ಭವಿಸಿದಳು. ಬ್ರಹ್ಮ, ಈಶ್ವರ, ಬೃಗು ಮಹರ್ಷಿಯೂ ಅಲ್ಲಿಗೆ ಬಂದರು. ಭೃಗುಮಹರ್ಷಿಯು "ಪೂರ್ವದಲ್ಲಿ ನಾನು ಮಾಡಿದ ತಪ್ಪನ್ನು ಕ್ಷಮಿಸಬೇಕೆಂದು ಲಕ್ಷ್ಮಿದೇವಿಯನ್ನು ಪ್ರಾರ್ಥಿಸಿದನು. ಅದಕ್ಕೆ ಲಕ್ಷ್ಮಿದೇವಿಯು ಅಂಗೀಕರಿಸಿ ಶ್ರೀನಿವಾಸನಿಗೆ ಪ್ರದಕ್ಷಿಣೆಯನ್ನು ಮಾಡಿದಳು. ಬ್ರಹ್ಮ ಈಶ್ವರ ಪ್ರಾರ್ಥನೆಯಂತೆ ಎಲ್ಲರೂ ಪದ್ಮಸರೋವರದಿಂದ ಹೊರಟು ಆನಂದ ನಿಲಯವನ್ನು ತಲುಪಿದರು. ಶ್ರೀ ಲಕ್ಷ್ಮಿದೇವಿಯೊಡನೆ ಶ್ರೀನಿವಾಸನು ಹೀಗೆ ಹೇಳಿದನು. ನೀನು ಶಾಶ್ವತವಾಗಿ ಇಲ್ಲಿಯೇ ಇದ್ದು ನಿನ್ನ ಭಕ್ತರಿಗೆ ಸಕಲ ಆಯುರಾರೋಗ್ಯ ಐಶ್ವರ್ಯಗಳನ್ನು ಅನುಗ್ರಹಿಸುತ್ತಾ ಇರು. ಭಕ್ತರು ಅದರಲ್ಲಿ ಸ್ವಲ್ಪ ಐಶ್ವರ್ಯವನ್ನು ನನಗೆ ಸಮರ್ಪಿಸುವರು. ಅದರಿಂದ ನಾನು ಕುಬೇರನಿಗೆ ಕಲಿಯುಗಾಂತರವರೆಗೆ ಬಡ್ಡಿಯನ್ನು ಪಾವತಿಮಾಡುವೆನು ಎಂದು ಕೋರಲು, ಶ್ರೀನಿವಾಸನ ಇಚ್ಚೆಯಂತೆ ಶ್ರೀ ಮಹಾಲಕ್ಷ್ಮಿಯು ತಮ್ಮನ್ನು ದರ್ಶನ ಮಾಡಲು ಬರುವ ಭಕ್ತರ ಕಷ್ಟಗಳನ್ನು ಪರಿಹರಿಸಿ ಅವರಿಗೆ ಸಕಲ ಆಯುರಾರೋಗ್ಯಗಳನ್ನು ಅನುಗ್ರಹಿಸತ್ತಾ ಅವರ ಸಕಲ ಪಾಪಗಳನ್ನು ಪರಿಹರಿಸುತ್ತಾ ಇರುವರು. ಲಕ್ಷ್ಮಿ ಕಟಾಕ್ಷದಿಂದ ಧನದಲ್ಲಿ ಸ್ವಲ್ಪವನ್ನು ಭಕ್ತರು ಶ್ರೀನಿವಾಸನ ಪಾದಾರವಿಂದಗಳಲ್ಲಿ ಸಮರ್ಪಿಸಿ ಆನಂದ ಭರಿತರಾಗುತ್ತಾ ಇರುವರು. ಕುಭೇರನಿಗೆ ಪ್ರತಿ ವರ್ಷದಲ್ಲಿಯೂ ಜುಲೈ ತಿಂಗಳಿನಲ್ಲಿ ದಕ್ಷಿಣಾಯಣ ಪುಣ್ಯಕಾಲದಲ್ಲಿ ನಡೆಯುವ ಆಣಿವರ ಅಸ್ಥಾನದ ದಿವಸದಲ್ಲಿ ಬಡ್ಡಿಯನ್ನು ಪಾವತಿ ಮಾಡುತ್ತಲಿರುವನು.

....ಮುಗಿಯಿತು

ಸಂಗ್ರಹ : ಮಳ್ಳಂದಿರ ಲಲಿತಾ ಶೇಷಗಿರಿ




✦ ಕೌಂಡಿನ್ಯ : ಧಾರವಾಹಿ -35

ಪ್ರಸನ್ನ ಸಾವರಿಸಿಕೊಂಡು ಎದ್ದು ನಿಂತನು. ಅವನಿಗೆ ಮುಖಕ್ಕೆ ಬಿದ್ದ ಹೊಡೆತಕ್ಕಿಂತ ಮನಸ್ಸಿನ ಮೇಲೆ ಆಗಿರುವ ಆಘಾತ ತೀವ್ರವಾಗಿದೆ.

ವೀರಭದ್ರ.... ಇವನ ಅಣ್ಣ!

ವೀರಭದ್ರ ಮುನ್ನುಗ್ಗಿ ತನ್ನ ಸಹೋದರನನ್ನು ಬಲವಾಗಿ ಜಾಡಿಸಿದನು. ಆ ರಭಸಕ್ಕೆ ಪ್ರಸನ್ನ ಮಂಚದ ಹತ್ತಿರ ಹೋಗಿ ದಡಾರನೆ ಬಿದ್ದನು.

ವೀರಭದ್ರ ಅವನನ್ನು ಹಿಡಿದೆತ್ತಿ ನಿಲ್ಲಿಸುತ್ತಾ "ಈಗ ನೀನು ಕೂಗಿ ಕೊಂಡರೂ ಸಹ ಆಳುಗಳು ಬರೋಲ್ಲ ಅವರ್‍ಯಾರಿಗೂ ಬೆಳಗಿನ ತನಕ ಎಚ್ಚರವಾಗುವುದಿಲ್ಲ."

ಪ್ರಸನ್ನ ಭಯದಿಂದ ನೋಡಿದನು.

ವೀರಭದ್ರ ಸೊಂಟಕ್ಕೆ ಸುತ್ತಿ ಕೊಂಡಿದ್ದ ನೈಲಾನ್ ಹಗ್ಗ ಹೊರಗೆ ತೆಗೆಯುತ್ತಾ "ಇದೇ ನಿನಗೆ ಕೊನೆಯ ರಾತ್ರಿ"

ಪ್ರಸನ್ನ ಎದ್ದು ನಿಲ್ಲುತ್ತಾ "ಅಂದರೆ ನನ್ನನ್ನು ನೀನು ಕೊಲೆ ಮಾಡುತ್ತೀಯ ?"

" ಖಂಡಿತಾ ಇಲ್ಲ. "

ಭಯ, ಅನುಮಾನದಿಂದ ನೋಡಿದನು.

"ನೀನಾಗಿಯೇ ಈ ಹಗ್ಗದಿಂದ ನೇಣು ಹಾಕಿಕೊಂಡು ಸಾಯುತ್ತೀಯ ಅಂದರೆ ಆತ್ಮಹತ್ಯೆ."

ಪ್ರಸನ್ನನಿಗೆ ಕೋಪ ಬರುತ್ತಿದೆ.

ವೀರಭದ್ರ "ಅಷ್ಟೇ ಅಲ್ಲ ........ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದೇನೆ ಅಂತ ನೀನು ಪತ್ರ ಬರೆಯುತ್ತೀಯ ?"

ಪ್ರಸನ್ನ ಕೋಪದಿಂದ "ನೀನು ಹೇಳಿದಂತೆ ಕೇಳುತ್ತೇನೆ ಅಂತ ನೀನ್ಯಾಕೆ ಅಂದು ಕೊಳ್ಳುತ್ತೀಯ ?"

"ಬ್ರಹ್ಮಾಸ್ತ್ರ ನನ್ನಹತ್ತಿರ ಇರೋದ್ರಿಂದ ".

"ಓ..... ಪಿಸ್ತೂಲೇ ?"

" ಖಂಡಿತಾ ಅಲ್ಲ"

ಪ್ರಸನ್ನನಿಗೆ ಗೊಂದಲ ಉಂಟಾಗುತ್ತಿದೆ.

ವೀರಭದ್ರ "ಆ ಬ್ರಹ್ಮಾಸ್ತ್ರವನ್ನು ನಂತರ ಹೊರಗೆ ತೆಗೆಯುತ್ತೇನೆ. ಸಾಯಲಿರುವ ನಿನಗೆ ಕೆಲವು ರಹಸ್ಯಗಳು ತಿಳಿಸುತ್ತೇನೆ. ನಿನ್ನ ಸಂದೇಹಗಳನ್ನು ಕೇಳು."

ಪ್ರಸನ್ನ "ನಿನಗೆ ಹುಚ್ಚು ಹಿಡಿದಿರಲಿಲ್ಲವೆ ?"

ವೀರಭದ್ರ "ಮಾನಸಿಕವಾಗಿ ದುರ್ಬಲನಾಗಿದ್ದ ನಾನು ಕೋಟ್ಯಾಂತರ ರೂಪಾಯಿ ಬೆಲೆ ಬಾಳುವ ನಿಧಿಯನ್ನು ಕಂಡ ಕೂಡಲೇ ಸಮತೋಲನ ಕಳೆದು ಕೊಂಡೆ, ಆ ಕ್ಷಣದಲ್ಲಿ ನನ್ನ ಸಹೋದರ ಲಿಂಗಯ್ಯನಂತೆ ನನಗೂ ಸಹ ಬುದ್ಧಿ ಭ್ರಮಣೆಯಾಗಿತ್ತು.

ಆದರೆ ನನ್ನ ಮನಸ್ಸು ಸರಿ ಹೋಗಿದ್ದು ಕೇವಲ ಮೂರು ತಿಂಗಳುಗಳ ಹಿಂದೆ.

ಪ್ರಸನ್ನ ಅತ್ಯಾಶ್ಚರ್ಯದಿಂದ "ಆದರೆ ಹುಚ್ಚನಂತೆ ಯಾಕೆ ಆ ಮೇಲೂ ಸಹ ನಾಟಕ ಆಡಿದೆ ?"

"ನಿಧಿ.......ನಿಧಿಗಾಗಿ ಸಹೋದರ "

"ಏನು.......ಏನಂದೆ ?"

"ಪ್ರಸನ್ನ......ನಿಧಿಯನ್ನೆಲ್ಲಾ ನೀನು ನಿನ್ನ ಸ್ವಾಧೀನಕ್ಕೆ ತೆಗೆದುಕೊಂಡು ಅರಮನೆಯಂತಹ ಬಂಗಲೆಯನ್ನು ಕಟ್ಟಿಸಿ ಮಹಾರಾಜನಂತೆ ಮೆರೆಯುತ್ತಿದ್ದೆ. ಎಲ್ಲಾ ರೀತಿಯಿಂದ ಪ್ರಬಲನಾಗಿರುವ ನಿನ್ನಿಂದ ನಿಧಿಯನ್ನು ವಶಪಡಿಸಿಕೊಳ್ಳಲು ಹುಚ್ಚನಂತೆ ನಾಟಕ ಆಡುವುದು ಅನಿವಾರ್ಯ ವಾಯಿತು."

ಪ್ರಸನ್ನ ಭಯದಿಂದ ಕೇಳುತ್ತಿದ್ದಾನೆ,

ವೀರಭದ್ರ "ನಿಜ ಹೇಳಬೇಕು ಅಂದರೆ ಅಕ್ಕ ಅರುಂಧತಿ ನಿನ್ನನ್ನು ಸಾಯಿಸಲು ಪ್ರಯತ್ನಿಸಲೇ ಇಲ್ಲ !"

" ನನಗದು ಗೊತ್ತಿದೆ."

"ಹೇಗೆ.... ಹೇಗೆ ಗೊತ್ತಾಯಿತು?"

"ಅಕ್ಕನ ಡೈರಿಯಿಂದ "

ವೀರಭದ್ರ ನಗುತ್ತಾ "ಅಕ್ಕ ಡೈರಿ ಬರೆದಿರಬಹುದು. ಆದರೆ ಅಕ್ಕನಿಗೂ ಗೊತ್ತಿರದೆ ಇರುವ ರಹಸ್ಯವನ್ನು ನಾನು ನಿನಗೆ ಹೇಳುತ್ತೇನೆ."

ಪ್ರಸನ್ನ "ಲಿಂಗಯ್ಯ ನನ್ನನ್ನು ಸಾಯಿಸಲು ಮೂರು ಸಲ ಪ್ರಯತ್ನಿಸಿದ್ದ, ಅಕ್ಕನ ಮೇಲೆ ಅನುಮಾನ ಬರುವಂತೆ ಮಾಡಿದ್ದ ಇದನ್ನೇ ತಾನೇ ನೀನು ಹೇಳ ಬೇಕು ಅಂತಿರೋದು ?"

ವೀರಭದ್ರ ನಗುತ್ತಾ " ನಿನಗೆ ಗೊತ್ತಿರೋದನ್ನ ರಹಸ್ಯ ಅಂತ ಯಾರಾದರೂ ಕರೆಯುತ್ತಾರೆಯೆ ?"

ಪ್ರಸನ್ನ ಗಾಬರಿಯಿಂದ ನೋಡಿದನು.

ವೀರಭದ್ರ "ಒಬ್ಬ ನಿಜವಾದ ಹುಚ್ಚನಿಗೆ ಯಾರನ್ನೂ ಸಹ ಕೊಲೆ, ಮಾಡಬೇಕು ಅಂತ ಅನಿಸುವುದಿಲ್ಲ."

"ಏನು.......ಏನಂದೆ ?"

ವೀರಭದ್ರ "ಲಿಂಗಯ್ಯನಿಗೆ ಮೊದಲಿನಿಂದಲೂ ಹಿಡಿದಿದ್ದ ಹುಚ್ಚು ಬಿಟ್ಟಿರಲಿಲ್ಲ! ಅವನು ನಿಜವಾದ ಹುಚ್ಚ. "

ಪ್ರಸನ್ನ ಗಡಗಡನೆ ನಡುಗಿದನು.

ಲಿಂಗಯ್ಯ ಅಣ್ಣ ತನ್ನನ್ನು ಸಾಯಿಸಲು ಪ್ರಯತ್ನಿಸಿದ್ದಾನೆ ಎಂಬ ಅನುಮಾನ ಬರುವಂತೆ ಆಧಾರ, ಸಾಕ್ಷಿ ದೊರೆತಿತ್ತು.

ವೀರಭದ್ರ ನಗುತ್ತಾ "ಅವನ ಬಗ್ಗೆ ನಿನಗೆ ಅನುಮಾನ ಬರಲಿ ಅಂತೆ ನಿನ್ನ ರೂಮಿನಿಂದ ನಾನೇ ರಮ್ ಸೀಸೆಯನ್ನು ಎತ್ತಿಕೊಂಡು ಹೋಗಿ ಅವನ ರೂಮಿನಲ್ಲಿ

19ನೇ ಪುಟಕ್ಕೆ

ಇಲ್ಲಿಯವರೆಗೆ.........

ರೇವತಿ ಪೋಲಿಸರಿಗೆ ತಾನು ಪತ್ತೆ ಮಾಡಿರುವ ಮುಖ್ಯ ರಹಸ್ಯವನ್ನು ತಿಳಿಸುತ್ತಾಳೆ. ಎಡತೊರೆ ಬಂಗಲೆಯಲ್ಲಿ ಪ್ರಸನ್ನನ ಮೇಲೆ ಹಲ್ಲೆ ನಡೆಯುತ್ತದೆ. ಹುಚ್ಚನಂತೆ ನಟಿಸುತ್ತಿದ್ದ ವೀರಭದ್ರ ಈಗ ದಾಳಿ ನಡೆಸುತ್ತಿದ್ದಾನೆ.

ಮುಂದೆ ಓದಿ..........

# ವಿದ್ಯಾವಂತ ನಿರುದ್ಯೋಗಿಗಳಿಗೆ ಮಾರ್ಗದರ್ಶಿ - 4

ತಡಿಯಪ್ಪನ ಕುಮಾರ ಜಯ

| | | |
|---|---|---|
| 161 ಕೆ.ಇ.ಬಿ ಸಿಟಿ ಏರಿಯಾ, ಹರ್ಷ ರಸ್ತೆ, ಮೈಸೂರು, | ಲೈನ್‌ಮೆನ್<br>ವೈರ್‌ಮೆನ್ | 42<br>8 |
| 162 ಕೃಷ್ಣ ಇಂಡಸ್ಟ್ರೀಸ್ ನಂ. ಎ 5, ಸಿಎಂಟಿ, ಐ.ಇ., ಮೈಸೂರು -16. | ಮೆಕನಿಸ್ಟ್ | 1 |
| 163 ಆದಿತ್ಯ ಇಂಡಸ್ಟ್ರೀಸ್ ನಂ.ಎ 8,ಸಿಎಂಟಿ, ಐ.ಇ. ಮೈಸೂರು -16./par 162 | ಟರ್ನರ್ | 1 |
| 164 ಸ್ಟಿಲಿನ್‌ವೆಲ್ ಇಂಜಿನಿಯರಿಂಗ್ ಕಂಪನಿ, ನಂ. 10 ಎ ಸಿಎಂಟಿ. ಐ.ಇ.,ಮೈಸೂರು -16 | (ಮೇಕಾ)ಗ್ರೈಂಡರ್ | 1 |
| 165 ಜಿಸಾನ್ ಇಂಡಸ್ಟ್ರೀಸ್, ಸಿಎಂಟಿ ಐ.,ಇ., ನಂ. ಎ 6 ಮೈಸೂರು -16 | ಟರ್ನರ್ | 1 |
| 166 ಇಂದವರ ಇಂಜಿನಿಯರ್ ಕಂ., ಇಂಡಸ್ಟ್ರೀಸ್ ಸಬರ್ಬ್, ಮೈಸೂರು -8 | ಫಿಟ್ಟರ್1ಫಿಟ್ಟರ್<br>ವೆಲ್ಡರ್ | 1<br>1 |
| 167 ಕಡೂರು ಸ್ಪಿಮಿಂಗ್ (ಪಿ.) ಲಿ., ಹುಣಸೂರು ರಸ್ತೆ, ಮೈಸೂರು -86 | ಮಿಸನಿಸ್ಟ್ | 4 |
| 168 ಸಿರನ್‌ಡಂ ಇಮಿರಲ್ (ಇಂಡಿಯ)ಪ್ರೈ. ಲಿ., ಪಿ.ನಂ.7 ಬೆಳವಾಡಿ ಐ.ಇ., ಮೈಸೂರು -16 | ಫಿಟ್ಟರ್ | 1 |
| 169 ವಿಶ್ವಾಸ್ ಟರ್ನರ್ (MIDC), ನಂ.234, ಮೇಟಗಳ್ಳಿ, ಐ.ಇ., ಮೈಸೂರು -16 | ಟರ್ನರ್ | 1 |
| 170 ಸೂಪರ್ ಇಂಜಿನಿಯರಿಂಗ್ ವರ್ಕ್ಸ್ ನಂ. 535/11 ನವಾಬ್‌ಸಾಹೇಬ ಮಸೀದಿ ಕಾಂಪ್ಲೆಕ್ಸ್, ಚಾಮರಾಜ ಜೋಡಿ ರಸ್ತೆ, ಮೈಸೂರು | ವೆಲ್ಡರ್ | 1 |
| 171 ಜಿ.ಡಿ. ಪ್ಯಾಕೇಟ್ ಪ್ರೈ.ಲಿ., ಅಶೋಕ ಪ್ಯಾಲೇಸ್ ರಸ್ತೆ, ಇಲವಾಲ,ಮೈಸೂರು | ಎಸ್.ಎಂ.ವರ್ಕರ್ | 2 |
| 172 ದೇವಿ ಇಂಡಸ್ಟ್ರೀಸ್, ಎ -1ಸಿಎಂಟಿ ಐ.ಇ., ಕೆ.ಆರ್.ಎಸ್. ರಸ್ತೆ, ಮೈಸೂರು -16 | ಮಿಸನಿಸ್ಟ್ | 1 |
| 173 ಕೂಲ್‌ವೇವ್ ಎಸಿಸಿ ಮತ್ತು ಫ್ರಿಡ್ಜ್ Mft. ಮತ್ತು ರೀಪೇರ್ಸ್ ನಂ. 535/10 ಎ, ಚಾಮರಾಜ ಜೋಡಿ ರಸ್ತೆ, ಮೈಸೂರು -1. | ಎಂ.ಆರ್.ಎ.ಸಿ. | 2 |
| 174 ಲಿಟ್ಲ್ ಇಂಜನಿಯರ್ಸ್ ನಂ. 524 ಮೂಲಿಶಾ, ಗೋಕುಲಂ, 3ನೇ ಹಂತ, ಮೈಸೂರು -2 | ಪಿಟ್ಟರ್ 1ಟರ್ನರ್<br>ವೆಲ್ಡರ್ 1 | 4 |
| 175 ಕಿಂಗ್ಸ್‌ಲೇ ಗಾರ್ಮೆಂಟ್ಸ್, ಮೇಟಗಳ್ಳಿ ಇಂಡಸ್ಟ್ರೀಸ್ ಎಸ್ಟೇಟ್, ಮೈಸೂರು | ಟೈಲರ್ (ಗಂಡು)<br>ಟೈಲರ್(ಹೆಣ್ಣು) | 114<br>20 |
| 176 ಶರೀಫ್ ಸೇಲ್ಸ್ ಅಂಡ್ ಜನರಲ್ ಏಜನ್ಸಿ ಸಯ್ಯಾಜಿರಾವ್ ರಸ್ತೆ, ಮೈಸೂರು | ಎಲೆಕ್ಟ್ರಿಷಿಯರ್<br>ಎಂ.ಆರ್.ಎ.ಸಿ. | 2<br>1 |
| 177 ಶ್ರೀ ಶ್ರೀನಿವಾಸ ಇಂಜನಿಯರ್ಸ್. ನಂ. 10 ಬಿ. 3ನೇ ಹಂತ ಐ.ಇ., ಮೈಸೂರು ಸೌತ್ ಮೈಸೂರು -8 | ಫಿಟ್ಟರ್<br>ಟರ್ನರ್ | 1<br>1 |
| 178 ಫುಡ್ ಮಿರ್ಚಿ, ಪಿ.ನಂ 5 ಫುಡ್ ಇಂಡಸ್ಟ್ರಿಸ್ ಕಾಂಪ್ಲೆಕ್ಸ್, ಮೇಟಗಳ್ಳಿ, ಮೈಸೂರು -16 | ಟರ್ನರ್<br>ಮಿಸನಿಸ್ಸ್ | 1<br>1 |
| 179 ನಟರಾಜ ಎಲೆಕ್ಟ್ರಿಕಲ್ ಅಪ್ಲಯನ್ಸಸ್ ಎಲೆಕ್ಟ್ರಿಕಲ್ ಐ.ಇ., ಯಾದವಗಿರಿ ಮೈಸೂರು -20 | ಮೆಕಾನಿಕ್ | 3 |

ಇದಲ್ಲದೆ ಮೈಸೂರು ಜಿಲ್ಲೆಯಲ್ಲಿ ಹಲವಾರು ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳಿವೆ. ಅದರ ವಿಳಾಸವನ್ನೂ ಸಹ ಕೊಟ್ಟಿದೆ. ಇಲ್ಲಿಯೂ ಸಹ ಉದ್ಯೋಗಾವಕಾಶಗಳು ಲಭ್ಯವಿದ್ದು ಆಸಕ್ತರು ಸಂಪರ್ಕಿಸಬಹುದಾಗಿದೆ.

ಹಿಂದಿನ ಸಂಚಿಕೆಯಿಂದ ಮುಂದುವರೆದಿದೆ.

| ಕ್ರ.ಸಂ. | ಯೂನಿಟ್‌ನ ಹೆಸರು ಮತ್ತು ವಿಳಾಸ | ಎಂಡ್ ಪ್ರಾಡಕ್ಟ್ |
|---|---|---|
| 1 | ಟೈಟಾನ್ ವಾಲ್ವ್ಸ್ ಲಿಮಿಟೆಡ್ ಹುಣಸೂರು ರೋಡ್, ಬೆಳವಾಡಿ ಇಂಡಸ್ಟ್ರಿಯಲ್ ಏರಿಯಾ ಮೈಸೂರು | ಇಂಡಸ್ಟ್ರಿಯಲ್ ವಾಲ್ವ್ಸ್ |
| 2 | ಆರ್. ಪಿ. ಜಿ. ಟೆಲಿಕಾಂ ಲಿಮಿಟೆಡ್ ಹೆಬ್ಬಾಳ್ ಇಂಡಸ್ಟ್ರಿಯಲ್ ಏರಿಯಾ ಮೈಸೂರು | ಪಾಲಿಥೀನ್ ಇನ್‌ಸುಲೇಟೆಡ್ ಅಂಡ್ ಜೆಲ್ಲಿ ಫೀಲ್ಡ್ ಟೆಲಿಫೋನ್ ಕೇಬಲ್ಸ್ |
| 3 | ಕಂಬೈನ್ಡ್ ಇಂಡಸ್ಟ್ರೀಸ್ ಲಿ. ಇಂಡಸ್ಟ್ರಿಯಲ್ ಸಬರ್ಬ್ IIIಸ್ಟೇಜ್ ಮೈಸೂರು ಸೌತ್, ಮೈಸೂರು | ಆಟೋಮೋಟಿವ್ ಇಂಡಾಲ್ ಚೈನ್ಸ್ |
| 4 | ಅಡ್ವಾನ್ಸ್ ಕಾಂಪೋನೆಂಟ್ಸ್ ಅಂಡ್ ಇನ್ಸ್ಟ್ರುಮೆಂಟ್ಸ್ ಪ್ರೈ. ಲಿ. ಬೆಳವಾಡಿ ಇಂಡಸ್ಟ್ರಿಯಲ್ ಏರಿಯಾ ಮೈಸೂರು | ಎಲೆಕ್ಟ್ರಾನಿಕ್ ಕಾಂಪೊನೆಂಟ್ಸ್ ಅಂಡ್ ಕಂಟ್ರೋಲಿಂಗ್ ಎಕ್ವಿಪ್‌ಮೆಂಟ್ಸ್ |
| 5 | ಬೆಲ್ಸ್ ಕಂಟ್ರೋಲ್ ಲಿಮಿಟೆಡ್, 123-1272, ಇಂಡಸ್ಟ್ರಿಯಲ್ ಏರಿಯಾ, ಮೈಸೂರು | ಎಲೆಕ್ಟ್ರಾನಿಕ್ ಪ್ರೊಸೆಸ್ ಅಂಡ್ ಕಂಟ್ರೋಲಿಂಗ್ ಎಕ್ವಿಪಂಮೆಂಟ್ |
| 6 | ಬ್ರೂಕ್ ಬಾಂಡ್ ಇಂಡಿಯಾ ಲಿಫ್ಟನ್ಸ್ ಲಿ. ಪ್ಲಾಟ್ ನಂ. 424, ಹೆಬ್ಬಾಳ್ ಇಂ. ಏರಿಯಾ, ಮೈಸೂರು | ಸಾಲ್ಯುಬಲ್ ಕಾಫಿ ಪೌಡರ್ ಅಂಡ್ ಫುಡ್ ಬೇವರೇಜಸ್ |
| 7 | ಮರುಗಪ್ಪ ಎಲೆಕ್ಟ್ರಾನಿಕ್ಸ್ ಲಿ. ಪ್ಲಾಟಂ ನಂ. 305, ಹೆಬ್ಬಾಳ್ ಇಂ. ಏರಿಯಾ, ಮೈಸೂರು | ಆಡಿಯೋ ಮ್ಯಾಗ್ನೆಟಿಕ್ - ಟೇಪ್ಸ್ ಅಂಡ್ ಕ್ಯಾಸೆಟ್ಸ್ |
| 8 | ಫಾಲ್‌ಕಾನ್ ಟೈರ್ಸ್ ಲಿಮಿಟೆಡ್ ಕೆ.ಆರ್.ಎಸ್.ರೋಡ್, ಮೇಟಗಳ್ಳಿ ಮೈಸೂರು | ಆಟೋಮೊಬೈಲ್ ಟೈರ್ಸ್ ಅಂಡ್ ಟ್ಯೂಬ್ಸ್ |
| 9 | ಲಾರ್ಸನ್ ಅಂಡ್ ಟೂಬ್ರೋ ಲಿ. ಹೆಬ್ಬಾಳ್ ಇಂಡಸ್ಟ್ರಿಯಲ್ ಏರಿಯಾ ಮೈಸೂರು | ಕಂಪ್ಯೂಟರ್ ಪೆರಿಫೇರಲ್ಸ್ ಎ. ಡಾಟ್ ಮ್ಯಾಟ್ರಿಕ್ಸ್ ಪ್ರಿಂಟರ್ ಬಿ. ಪ್ಲಾಪಿಡಿಸ್ಕ್ ಡ್ರೈವ್ಸ್ ಸಿ. ಎಲೆಕ್ಟ್ರಾನಿಕ್ ಮೆಷರಿಂಗ್ ಇನ್ಸ್ಟುಮೆಂಟ್ಸ್ |
| 10 | ಗಣೇಶ್ ಗೇರ್ಸ್ ಪ್ರೈ.ಲಿ. ನಂ. 99, ಬೆಳಕೊಳ ಇಂಡಸ್ಟ್ರಿಯಲ್ ಏರಿಯಾ, ಮೈಸೂರು | ಆಟೋಮ್ಯಾಟಿಕ್ ಗೇರ್ಸ್ |
| 11 | ಆಟೋಮೊಟಿವ್ ಆಕ್ಸಲ್ ಲಿ. ಹೂಟಗಳ್ಳಿ ಇಂಡಸ್ಟ್ರಿಯಲ್ ಏರಿಯಾ ಮೈಸೂರು. | ಆಕ್ಸಲ್ ಹೌಸಿಂಗ್ ಬ್ರೇಕ್ಸ್ ಗೇರ್ಸ್ ಅಂಡ್ ಸ್ಟೇರ್ಸ್ |
| 12 | ಅಮಾಲ್ಗಮೇಷನ್ ರೆಪ್‌ಕೊ ಲಿ. ಪ್ಲಾಟ್ ನಂ. 9, ಬೆಳವಾಡಿ ಇಂ. ಏರಿಯಾ, ಹುಣಸೂರು ರಸ್ತೆ, ಮೈಸೂರು | ಆಟೋಮೋಟಿವ್ ಕ್ಲಚ್ ಅಸೆಂಬ್ಲೀಸ್ ಅಂಡ್ ಕಾಂಪೋನೆಂಟ್ಸ್ |
| 13 | ಗ್ಲೋಟ್ರಾನಿಕ್ಸ್ ಲಿಮಿಟೆಡ್ ಹೂಡಗಳ್ಳಿ ಇಂ. ಏರಿಯಾ ಮೈಸೂರು | ಎಲೆಕ್ಟ್ರಾನಿಕ್ ಗನ್ಸ್ ಹೀಟರ್ಸ್ ಲಿಮಿಟೆಡ್ ಕಂಪನಿ ಫಾರ್ ಎಲೆಕ್ಟ್ರಾನ್ ಗನ್ಸ್ ಅಂಡ್ ಕ್ಯಾತೋಡ್ಸ್ ಫಾರ್ ಎಲೆಕ್ಟ್ರಾನ್ ಗನ್ಸ್ |

| | | |
|---|---|---|
| 14 | ಯಜ್ಞಡಿಸ್ಟಿಲರಿಸ್, ಬನ್ನಿಮಂಟಪ ಲೇಔಟ್, ಮೈಸೂರು | ಇಂಡಿಯಾ ಮೇಡ್ ಫಾರಿನ್ ಲಿಕ್ಕರ್ |
| 15 | ಕರ್ಬೋ ಸೆರಾಮಿಕ್ ಪ್ರೈ. ಲಿ. ಪ್ಲಾಟ್ ನಂ. 43/A, ಬೆಳವಾಡಿ ಇಂ. ಏರಿಯಾ, ಮೈಸೂರು. | ಕ್ಲೇ ಗ್ರಾಫೈಟ್ ಸ್ಪಾಪರ್ ಹೆಡ್ಸ್ |
| 16 | ದೀಪ ಆಕ್ಸಿಜನ್ ಪ್ರೈ.ಲಿ. ಪ್ಲಾಟ್ ನಂ. 107 ಪಿ. ಮೇಟಗಳ್ಳಿ, ಮೈಸೂರು | ಇಂಡಸ್ಟ್ರಿಯಲ್ ಗ್ಯಾಸ್ |
| 17 | ಮೆ. ವಿಕ್ರಾಂತ್ ಟೈರ್ಸ್ ಲಿಮಿಟೆಡ್ ಕೆ.ಆರ್. ಎಸ್. ರೋಡ್, ಮೇಟಗಳ್ಳಿ ಮೈಸೂರು | ಆಟೋಮೋಟೀವ್ ಟೈರ್ಸ್ ಟ್ಯೂಬ್ಸ್ ಫ್ಲಾಪ್ಸ್ |
| 18 | ಸಿಲ್ಕ್ ವೀವಿಂಗ್ ಫ್ಯಾಕ್ಟರಿ, ಮಾನಂದವಾಡಿ ರೋಡ್, ಮೈಸೂರು ಸೌತ್, ಮೈಸೂರು | ಪ್ಯೂರ್‌ಸಿಲ್ಕ್ ಫ್ಯಾಬ್ರಿಕ್ಸ್ |
| 19 | ರಾಣೆ ಮದ್ರಾಸ್ ಹೂಟಗಳ್ಳಿ, .ಏರಿಯಾ, ಮೈಸೂರು | ಟೈ ರಾಡ್ ಎಂಡ್ಸ್ ಅಂಡ್ ಲೈನ್ಸ್ ಸ್ಟೇರಿಂಗ್ ಗೇರ್ಸ್ |
| 20 | ಏಷಿಯನ್ ಕೇಬಲ್ಸ್ ಲಿ. (ವಿಲ್‌ಟೆಕ್ ಇಂಡಿಯಾ ಲಿ.) ಮೇಟಗಳ್ಳಿಇಂ. ಏರಿಯಾ, ಮೈಸೂರು | ಸೇಫ್ಟಿ ರೇಜರ್ ಬ್ಲೇಡ್ಸ್ ರೇಜರ್ ಹ್ಯಾಂಡಲ್ಸ್ |
| 21 | ಮೈಸೂರು ಡಿಸ್ಟ್ರಿಕ್ಟ್ ಮಿಲ್ಕ್ ಪ್ರೊಡ್ಯೂಸರ್ಸ್ ಯುನಿಯನ್. ಟಿ. ನರಸೀಪುರ ರಸ್ತೆ, ಮೈಸೂರು | ಮಿಲ್ಕ್ ಪ್ರಾಡಕ್ಟ್ಸ್ |
| 22 | ಕರ್ನಾಟಕ ಸೋಪ್ಸ್ ಅಂಡ್ ಡಿಟರ್ಜೆಂಟ್ಸ್ ಲಿ. (ಸ್ಯಾಂಡ್ ಆಯಿಲ್ ಡಿ) ಮಾನಂದವಾಡಿ ರೋಡ್, ಮೈಸೂರು | ಸ್ಯಾಂಡಲ್‌ವುಡ್ ಆಯಿಲ್ ಅಗರ್‌ಬತ್ತಿ ಸ್ಕ್ರೇಪ್ಸ್ |
| 23 | ವಿಪ್ರೊ ಇನ್‌ಫೋಟೆಕ್ ಲಿ. ಪ್ಲಾಟ್‌ನಂ. 126, ಬೆಳಗೊಳ ಇಂ. ಏರಿಯಾ ಮೇಟಗಳ್ಳಿ ಮೈಸೂರು. | ಕಂಪ್ಯೂಟರ್ |
| 24 | ಮೈಸೂರುಪಾಲಿಮರ್ಸ್ ಪ್ರೈ.ಲಿ. ಕೆ.ಆರ್.ಎಸ್, ರೋಡ್ ಮೇಟಗಳ್ಳಿ ಮೈಸೂರು | ರಬ್ಬರ್ ಟ್ಯೂಬ್ ಬ್ಯೆಟೈಲ್ |
| 25 | ಶಿವಮೊಗ್ಗ ಸ್ಟೀಲ್ಸ್ ಲಿ. (ಯೂನಿಟ್ -II) ಪ್ಲಾಟ್ ನಂ.289, ಹೆಬ್ಬಾಳ್ ಇಂ.ಏ ಮೈಸೂರು | ಎಂ.ಎಸ್ ಅಂಡ್ ಸಿ ಐ ಕ್ಯಾಸ್ಟಿಂಗ್ಸ್ |
| 26 | ಒಕೆಎಸ್ ಸ್ಪೆಷಾಲಿಟೀಸ್ ಇಂಡಿಯಾ ಲೂಬ್ರಿಕೆಂಟ್ಸ್ ಪ್ರೈ. ಲಿ. ಪ್ಲಾಟ್ ನಂ. 289, ಹೆಬ್ಬಾಳ್ ಇಂ.ಏ., ಮೈಸೂರು | ಸ್ಪೆಷಾಲಿಟಿ ಲೂಬ್ರಿಕೆಂಟ್ಸ್ |
| 27 | ರೆಮಿಂಗ್‌ಟನ್ ರ್‍ಯಾಂಡ್ (ಇಂಡಿಯಾ)ಲಿ. ಪ್ಲಾಟ್ ನಂ. 85A, ಹೆಬ್ಬಾಳ್ ಇಂ. ಏರಿಯಾ, ಮೈಸೂರು | ಎಲೆಕ್ಟ್ರಾನಿಕ್ ಪುಷ್ ಬಟನ್ ಟೆಲಿಫೋನ್ಸ್ |
| 28 | ರಾಜ್‌ಕಮಲ್ ಪಾಲಿಮರ್ಸ್ ಪ್ರೈ. ಲಿ. ಮೇಟಗಳ್ಳಿಇಂಡಸ್ಟ್ರಿಯಲ್ ಏರಿಯಾ, ಮೈಸೂರು | ರಬ್ಬರ್ ಮಿಕ್ಸಿಂಗ್ |
| 29 | ಇಂಡಿಯನ್ ಪಿಸ್ಟನ್ ರೆಪ್ ಕೋ ಲಿ. ಗ್ಲಾಸ್ ಡಿವಿಜನ್ ಹೆಬ್ಬಾಳ್ ಇಂ. ಏ., ಮೈಸೂರು | ಲೆಡ್‌ಗ್ಲಾಸ್ ಟ್ಯೂಬಿಂಗ್ಸ್ |
| 30 | ಮೆಟಲ್ ಲ್ಯಾಂಪ್‌ಕ್ಯಾಪ್ಸ್ (ಇಂ) ಲಿ. ಗ್ಲಾಸ್ ಡಿವಿಜನ್, ಹೆಬ್ಬಾಳ್‌ಇಂ. ಏ. ಮೈಸೂರು | ಲೆಡ್ ಗ್ಲಾಸ್ ಟ್ಯೂಬಿಂಗ್ |
| 31 | ಬೋರುಕಾ ಅಲ್ಯೂಮಿನಿಯಮ್ ಲಿ. ಮೇಟಗಳ್ಳಿ, ಇಂ. ಏರಿಯಾ ಮೈಸೂರು | ಅಲ್ಯೂಮಿನಿಯಮ್ ಟ್ರೆಸಸ್ |
| 32 | ವೆಸ್‌ಲಾನ್ ಪಾಲಿಯೆಸ್ಟರ್ ಫಿಲಿಂಸ್‌ಲಿ. ಪ್ಲಾಟ್ ನಂ. 26P, ಬೆಳವಾಡಿ ಇಂ. ಏ. ಹುಣಸೂರು ರೋಡ್, ಮೈಸೂರು | ಬಯಾಕ್ಸಿಯಲಿ ಪ್ರಿಂಟೆಡ್ ಪಾಲಿಯೆಸ್ಟರ್ ಫಿಲಿಂ ಪಾಲಿಯೆಸ್ಟರ್ ಚಿಪ್ಸ್ |
| 33 | ರಿಕೆಟ್ ಅಂಡ್ ಕೋಲ್ಮನ್ ಇಂಡಿಯಾ ಲಿ. ಹೂಟಗಳ್ಳಿ, ಇಂ. ಏರಿಯಾ, ಮೈಸೂರು | ಆಸ್ಪಿನ್ ಬೇಸ್ಡ್ ಅಪ್ಲಗ್ಯಾಸ್ಟಿಕ್, ಟ್ಯೂಬ್ಸ್ |
| 34 | ವಿಷ್ಣು ಫ್ರಾಗ್ (ಮೈಸೂರು) ಲಿ. ಕೆ.ಆರ್.ಎಸ್. ರೋಡ್, ಮೇಟಗಳ್ಳಿ, ಮೈಸೂರು | ಫ್ರಿಕ್ಷನ್ ಕ್ಲಾಸ್ಡ್ ಡೈಫ್ರಾಗಿನ್ಸ್ |
| 35 | ಕೊಡಗು ಫುಡ್ಸ್ ಪ್ರೈ. ಲಿ. ಕೆ.ಆರ್. ಎಸ್. ರೋಡ್ ಮೇಟಗಳ್ಳಿ ಮೈಸೂರು | ಬೇಕರಿ ಈಸ್ಟ್ |
| 36 | ತ್ರಿವೇಣಿ ಇಂ. ವರ್ಕ್‌ಲಿ. ಕೆ.ಆರ್.ಎಸ್. ರೋಡ್, ಮೇಟಗಳ್ಳಿ ಇಂಡಸ್ಟ್ರಿಯಲ್ ಏರಿಯಾ ಮೈಸೂರು | ಸ್ಟೀಮ್ ಟರ್ಬೈನ್ ಹಾರ್ಡ್‌ನ್ಡ್ ಗೇರ್ಸ್ |
| 37 | ಶಿವಮೊಗ್ಗ ಸ್ಟೀಲ್ಸ್‌ಲಿ. ಕೆ.ಆರ್.ಎಸ್.ರೋಡ್, ಮೇಟಗಳ್ಳಿ ಇಂ. ಏ., ಮೈಸೂರು | ಹೈ ಕಾರ್ಬನ್ ವೈರ್ ರಾಡ್ಸ್ |
| 38 | ಜೀಪ್ ಇಂ. ಸಿಂಡಿಕೇಟ್‌ಲಿ. ಬೆಳಗೊಳ ಇಂ. ಏ. ಮೇಟಗಳ್ಳಿ ಮೈಸೂರು | ಡ್ರೈ ಬ್ಯಾಟರಿ |
| 39 | ಸ್ಯಾನ್ ಟ್ರನ್ಸ್‌ಮಿಷನ್‌ಲಿ. ಹೆಬ್ಬಾಳ್ ಇಂ. ಎ. ಮೈಸೂರು | ಸ್ಟರಿಂಗ್ ಅಸೆಂಬ್ಲಿಂಗ್ ಸೆಟ್ಸ್ ಇಂನ್‌ಕ್ಲೂಡಿಂಗ್ ಸ್ಟರಿಂಗ್ ಅಂಡ್ ಕಾಂಪೊನೆಂಟ್ಸ್ |
| 40 | ಭಾರತ್ ಅರ್ಥ್ ಮೂವರ್ಸ್ ಲಿ. ಹೂಟಗಳ್ಳಿ, ಇಂ. ಏ., ಮೈಸೂರು | ಡಂಪರ್ಸ್ |
| 41 | ಹಿಂದೂಸ್ಥಾನ್ ಆಯಿಲ್ ಕಾರ್ಪೋರೇಷನ್ ಎಲ್.ಪಿ.ಜಿ. ಬಾಟ್ಲಿಂಗ್ ಪ್ಲಾಂಟ್, ಹೆಬ್ಬಾಳ್ ಇಂಡಸ್ಟ್ರಿಯಲ್ ಏರಿಯಾ ಮೈಸೂರು | ಫಿಲ್ಲಿಂಗ್ ಆಫ್ ಎಲ್.ಪಿ.ಜಿ. |
| 42 | ವಿಜಯ ವೈರ್ಸ್ ಅಂಡ್‌ಫಿಲಮಂಟ್ಸ್‌ಲಿ. ಕೆ.ಆರ್.ಎಸ್. ರೋಡ್, ಮೇಟಗಳ್ಳಿ ಮೈಸೂರು | ಟಂಗ್‌ಸ್ಟನ್‌ಫಿಲಮೆಂಟ್ಸ್ |
| 43 | ತ್ರಿವೇಣಿ ಇಂಜಿನಿಯರಿಂಗ್ ವರ್ಕ್ ಲಿ. ಬೆಳವಾಡಿ ಇಂಡಸ್ಟ್ರಿರಿಯಲ್ ಏರಿಯಾ ಮೈಸೂರು | ಇಂ. ಹೀಟಿಂಗ್ ಕಾಂಪೊನೆಂಟ್ಸ್ ನೆಟ್ಸ್ ಮೆಕಾನೈಜ್ಡ್ ಕೈಪಾಸಿಟರ್ಸ್ |
| 44 | ಬಿ.ಟಿ.ಸೋಲ್ಡರ್ಸ್ ಪ್ರೈ.ಲಿ. ಮೇಟಗಳ್ಳಿ, ಇಂ. ಏ. ಮೈಸೂರು | ಫ್ರಕ್ಸ್ ಕೇಸ್ ಸೋಲ್ಡರ್ಸ್ ಸೋಲ್ಡರ್ಸ್ ಪ್ರಾಡಕ್ಟ್ಸ್ |
| 45 | ವಿಕ್ರಾಂತ್ ರೇಡಿಯಲ್ ಪ್ಲಾಂಟ್ ಹೆಬ್ಬಾಳ್ ಇಂಡಸ್ಟ್ರಿಯಲ್ ಏರಿಯಾ ಮೈಸೂರು | ರೇಡಿಯಲ್ ಟೈರ್ಸ್ ಟ್ಯೂಬ್ಸ್ ಎಟ್ಸೆಟ್ರಾ |
| 46 | ಬಿಜೆಪಿ ಸ್ಯಾಕ್ಸ್ ಪ್ರೈ. ಲಿ. 11th ಕೆ.ಎಂ. ಕಡಕೊಳ, ಮೈಸೂರು ತಾಲ್ಲೂಕು | ಹೆಚ್‌ಡಿಪಿಇ ಪಿಪಿ ಓವನ್ ಸ್ಯಾಕ್ಸ್ |
| 47 | ವಿಜಯ ವೈರ್ಸ್ ಅಂಡ್ ಫಿಲಮೆಂಟ್ಸ್ ಲಿ. ಯುನಿಟ್ II ಹೆಬ್ಬಾಳ್ ಇಂ. ಏರಿಯಾ ಮೈಸೂರು | ಟಂಗ್‌ಸ್ಟನ್ ಫಿಲಮೆಂಟ್ಸ್ |
| 48 | ಗ್ಲೋಟ್ರಾನಿಕ್ಸ್ ಇಂ. ಲಿ. ಯೂನಿಟ್ II, ಹೂಟಗಳ್ಳಿ, ಇಂ. ಏರಿಯಾ, ಮೈಸೂರು | ಕ್ಯಾಥೋತಡ್ |
| 49 | ವಿಪ್ರೋಇನ್‌ಫೋಟೆಕ್‌ಲಿ. ಹೆಬ್ಬಾಳ್ ಇಂ. ಏರಿಯಾ, ಮೈಸೂರು | ಕಂಪ್ಯೂಟರ್ ಪ್ರಿಂಟ್ರರ್ಸ್ |
| 50 | ಗೋದ್ರೇಜ್ ಫುಡ್ಸ್ ಲಿಮಿಟೆಡ್ ಪ್ಲಾಟ್ ನಂ. 310, ಹೆಬ್ಬಾಳ್ ಇಂ. ಏರಿಯಾ, ಮೈಸೂರು | ಪ್ರೂಟ್ ಪಲ್ಪ್ ಬೇಸ್ಡ್ ಸಾಫ್ಟ್ ಡ್ರಿಂಕ್ಸ್ |

ಮುಂದುವರಿಯುತ್ತದೆ.

# ಪತ್ರ ವಿಭಾಗ :



ಪ್ರಿಯರೇ,

ಲೇಖನವು ಅರ್ಥಪೂರ್ಣವಾಗಿದೆ

ನಿಮ್ಮ ಪತ್ರಕ್ಕೆ ಕೆಲಸದ ಒತ್ತಡದಿಂದ ಕೂಡಲೆ ಉತ್ತರಿಸಲಾಗಲಿಲ್ಲ. ಆಗಸ್ಟ್ 15ರ ಒಳಗಾಗಿ ನಿಮ್ಮ ಪತ್ರಿಕೆಗೆ ಲೇಖನ ಕಳುಹಿಸಿ ಕೊಡುವೆ. ಖಂಡಿತವಾಗಿಯೂ ಸಾಧ್ಯವಾದಲ್ಲಿ ಪ್ರತಿ ಸಂಚಿಕೆಗೂ ಲೇಖನ ಕಳುಹಿಸುವೆ. ಇನ್ನೊಂದು ತಿಂಗಳಾದರೂ ಸಮಯಾವಕಾಶ ಬೇಕು.

ನನ್ನ ಕುರಿತ ಲೇಖನ ಒಂದೆರಡು ತಿಂಗಳು ಕಳೆಯಲಿ

ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಗಿರುವ ಸಾಕಷ್ಟು ಸಮಸ್ಯೆಗಳ ನಡುವೆಯೂ ಉತ್ತಮವಾಗಿ ಹೊರ ಬರುತ್ತಿದೆ. ಇನ್ನಷ್ಟು ಜಾಹೀರಾತು ಸಂಗ್ರಹಿಸಿದರೆ ಮಾತ್ರ ಆರ್ಥಿಕ ಬಲ ಸಾಧ್ಯ. ಲೇಖನಗಳು ಅರ್ಥಪೂರ್ಣವಾಗಿವೆ. ಹೀಗೆಯೆ ಮುಂದುವರಿಯಲಿ

**Anil H.T.,** District Correspondent,
Udaya T.V, News Division,
Communication, Madikeri

16ನೇ ಪುಟದಿಂದ

ಇರಿಸಿದ್ದೆ. ಅವನ ಒಂದು ಚಪ್ಪಲಿ ತಂದು ಹೊರ ಹಾಕಿದ್ದೆ. ಪಿಸ್ತೂಲನ್ನು ನಾನೇ ಅವನ ದಿಂಬಿನಡಿ ಇರಿಸಿದ್ದೆ."

ಪ್ರಸನ್ನ ತತ್ತರಿಸಿ ಹೋಗುತ್ತಿದ್ದಾನೆ.

ವೀರಭದ್ರ "ನಿನಗೆ ಲಿಂಗಯ್ಯನ ಮೇಲೆ ಅನುಮಾನ ಬಂದಿತು. ನೀನು ಅಕ್ಕ ಭಾವನನ್ನು ಕೊಂದಂತೆ ಲಿಂಗಯ್ಯನನ್ನು ಕೊಲೆ ಮಾಡಲಿ ಅಂತ ಪ್ರಚೋದಿಸಿದೆ. ಅಂತು ನಾನು ಅಂದು ಕೊಂಡಿದ್ದನ್ನು ಸಾಧಿಸಿದೆ. ನಿನ್ನಕೈಯಿಂದ ನಿಧಿಗೆ ಪಾಲುದಾರರಾಗಿದ್ದ ಎಲ್ಲರನ್ನೂಕೊಲೆ ಮಾಡಿಸಿದೆ. ಬೇಷ್..... ತುಂಬಾ ಬುದ್ಧಿವಂತಿಕೆಯಿಂದ ಹೊಸ ತಂತ್ರ ಉಪಯೋಗಿಸಿ ಕೊಲೆ ಮಾಡಿದೆ. ಅಂದ ಹಾಗೆ ನೀನು ಯಾವ ರೀತಿ ಕೊಲೆಗಳನ್ನು ಮಾಡಿದೆ ಅಂತ ವಿವರಿಸುತ್ತೀಯ ಸಹೋದರ ?"

ಪ್ರಸನ್ನ ವಿದ್ಯುತ್ ಸ್ಪರ್ಶವಾದವರಂತೆ ಅದುರಿ ಅಲ್ಲಾಡಿ ಹೋದನು !

ಅರೆ.....ಅರೆ.....ವೀರಭದ್ರ ಹೇಳುತ್ತಿರುವುದಾದರೂ ಏನು ? ನಾನು.......ನಾನು ಈ ಕೊಲೆಗಳನ್ನು ಮಾಡಿರುವೆನೆ ?ಇಲ್ಲ... ಇಲ್ಲ.... ನಾನು ....ನಾನು ಈ ಕೊಲೆಗಳನ್ನುಮಾಡಿಲ್ಲ ಇದು ಹೇಗೆ ನಡೆಯಿತು ಅಂತ ನನಗೆ ಈಗಲೂ ಸಹ ಗೊತ್ತಿಲ್ಲ ಎಂದು ಪ್ರಸನ್ನ ಕೂಗಿಕೊಂಡನು ?

(ಮುಂದುವರೆಯುತ್ತದೆ)

---

## ಹಳ್ಳಿ ಗಿಡಮದ್ದ್

ಹಲ್ಲ್ ಬ್ಯಾನೆಗೆ ಹಾಲೆ ಹಣ್ಣಿನ ಬೀಜದ ಬೆಂಡ್ ಜೊತೆ ಬೆಳ್ಳುಳ್ಳಿಹಾಕಿ ಗುದ್ದಿ ಹತ್ತಿ ಮಧ್ಯ ಇಟ್ಟ್‌ಬ್ಯಾನೆ ಮೇಲೆ ಇಡಕು. ಅದರ ನೀರ್‌ನ ಉಗಿತ ಇರಕು. ಆಗ ಹುಳಗಸತ್ತ್ ಬತ್ತ್ಯಾನೆಮಂಗಮಾಯ ಆದೆ.

ಕಲ್ಲ್‌ಗುಡ್ಡೆಸೊಪ್ಪುಗೆ ಬೆಳ್ಳುಳ್ಳಿ ಹಾಕಿ ಜೆಜ್ಜಿ ಬಿಳಿಬಟ್ಟೆಯೊಳಗೆ ಇಟ್ಟ್ ಕೆಮಿಗೆ ಹಿಂಡಕು, ಆ ಮೇಲೆ ಮದ್ದ್‌ನ ಅಲ್ಲೆ ಇಟ್ಟರೆ ಹುಳಗ ಮೇಲೆಬಂದ್ ಬ್ಯಾನೆಹೋರ್ಟ್ ಹೋದೆ. ಕಿವಿ ಬ್ಯಾನೆ ಕಮ್ಮಿ ಆದೆ.

ಬಜದ ಸೊಪ್ಪುಗೆ ಉಪ್ಪುನ ಸೇರ್ಸಿ ಹಲ್ಲಿಗಿಟ್ಟರೆ ಬ್ಯಾನೆ ದೀಪಾವಳಿ ರಾಕೇಟ್ ಹೋದಂಗೆ ಹೊರಟ್ ಹೋದೆ.

ಕಣ್ಣ್ ಬ್ಯಾನೆ ಕಲೆ ಕೆಂಪು ತಿಳಿಯಾಕೆ ಜೀರಿಗೆ ಕಾಳ್, ಕಾಡ್ ಮುಳ್ಳು,ಚುಂಡೆ ಸೊಪ್ಪ್, ಸೇರಿಸಿ ಅರ್ದ್ ಬಿಳಿ ಬಟ್ಟೆಲಿ ಹಾಕಿ ಕಣ್ಣಿಗೆ ಬುಡಿ. ಕೆಂಪು ಕಲೆ ಹೋದೆ

ಉಳುಕಿದರೆ : ಸೊಂಟ, ಕೈ, ಕಾಲ್ ಯಾವುದೇ ಭಾಗ ಆಗಲಿ ಬ್ಯಾನೆ ಇದ್ದವನ ಪಕ್ಕಲಿ ಇನ್ನೊಬ್ಬ ನಿಲ್ಲಕು, ಎರಡ್ ಬಾಳೆ ರಟ್ಟೆ ತಕಂಡ್ ಇಬ್ಬರು ಕ್ರಮ ಪ್ರಕಾರ ಸೊಂಟದ ಎರಡ್ ಪಕ್ಕದಲ್ಲಿ ಹಿಡ್‌ಕಣಕು, ಮದ್ದ್ ಮಾಡುವವ ಸಣ್ಣ ನೆಲ ಮುಚ್ಚೊಳಿಕೆ ಸೊಪ್ಪು ಬಾಣೆಲಿ ಸಿಕ್ಕಿದೆ ತಕಂಡ್ ಬಾಳೆ ಮಧ್ಯ, ರಟ್ಟೆ ಮಧ್ಯ ಚೂರು ಮಾಡಿ ಹಾಕ್‌ತಬರಕು. ಅಗ ಬಾಳೆ ರಟ್ಟೆ ಸೇರಿಕಂಡದೆ. ಈಗ ಕತ್ತಿ ತಕಂಡ್ ಬಾಳೆ ರಟ್ಟೆನ ಕಡಿಯಕು. ಆಗ ನೋಡಿ ಮಜ ಹಾರಿಕೆ, ಬೀಳಿಕೆ, ಓಡಿಕೆ.

ಕಿವಿ ಬ್ಯಾನೆ ಮಕ್ಕಳಿಗೆ : ಸೋಸಿದ ಬೂಧಿಗೆ ನಿಂಬೆ ರಸಲಿ ಅರ್ದ್ ಕಿವಿಗೆ ಬುಡಕು ಗೋಲಿಂಗದ ಹುಳುನ ತೆಂಗಿನೆಣ್ಣೆಲಿ ಹಾಕಿ ಬಿಸಿ ಮಾಡಿ ಕಿವಿಗೆ ಬಿಟ್ಟರೆ ಮಕ್ಕಳ ಕಿರುಚಾಟ ಕಮ್ಮಿ ಆದೆ.

ಗಂಟಲು ಬ್ಯಾನೆ : ಆನೆ ಹಲ್ಲ್‌ನ ನಿಂಬೆ ನೀರ್‌ಲಿ ಅರ್ದ್ ಹಾಕಿರೆ ಬ್ಯಾನೆ ಕಮ್ಮಿ ಆಗಿ ಹೊಟ್ಟೆ, ತುಂಬಾ ಊಟ ಮಾಡಕ್.

ಸೀತ, ದಮ್ಮು, ನ್ಯಾವಸಕೆ : ಬಂದಣಿಕೆ ಗಿಡದತೊಪ್ಪೆ, ಬೆಳ್ಳುಳ್ಳಿ, ಒಳ್ಳೆ ಮೆಣಸ್ ಸೇರ್ಸಿ ಅರ್ದ್ ಕಬ್ಬಿಣ ಬಿಸಿ ಮಾಡಿ ಹಾಕಿ ಮಕ್ಕಳಿಗೆ ಕುಡ್ಸಿರೆ ಮಕ್ಕ ನೆಗ್‌ಡಿ ಸುರ್ಸ್‌ದುಲೆ.

ಸಂಗ್ರಹ : ಮಂಞಂಡ್ರ ಗಣೇಶ್, ಬೆಂಗಳೂರು

---

ಬಾಳುವಷ್ಟು ಕಾಲವೂ ಕಲಿಯುತ್ತಲೇ ಇರಬೇಕು.

# ಕೊಡಗಿನಲ್ಲಿ "ಪನ್ಯ" ಜಮೀನು

— ಐ. ಕೆ. ಕುಶಾಲಪ್ಪ, ಗರ್ವಾಲೆ

ಇಕ್ಕೇರಿ ರಾಜರು ಕೊಡಗಿನಲ್ಲಿ ಹದಿನಾರನೇ ಶತಮಾನದ ಆದಿಯಿಂದ ಕ್ರಿ.ಶ. 1834ರವರೆಗೆ ಕೊಡಗು ದೇಶವನ್ನು ನಿರಂಕುಶವಾಗಿ ಆಳಿದರೆಂಬುದು ಚರಿತ್ರೆ ಸಿದ್ಧಾಂತ. ಈ ಅವಧಿಯಲ್ಲಿ ಕೊಡಗಿನ ಕೆಲವು ಕಡೆಗಳಲ್ಲಿ (ಉದಾ:ಹೊರಮಲೆ, ಅಪ್ಪಂಗಳ, ಗರ್ವಾಲೆ)ರಾಜವಂಶದ ಕೆಲವರನ್ನುಸ್ವತಂತ್ರವಾಗಿ ಜೀವಿಸಲು ಹಲವು ಎಕರೆ ಬತ್ತದ ಗದ್ದೆಮತ್ತು ಅರಣ್ಯ ಪ್ರದೇಶಗಳನ್ನು ಅದಾವುದೋ ಹೆಸರಿನಲ್ಲಿ ಮಡಿಕೇರಿಯ ಮುಖ್ಯರಾಜರು ಒದಗಿಸಿ ಕೊಟ್ಟಿದ್ದರು. ಈ ರೀತಿ ಜೀವನ ನಡೆಸಿದವರ ಪೈಕಿ, ಗರ್ವಾಲೆಯಲ್ಲಿ ಅಪ್ಪಾಜಿರಾಜ ಎಂಬವರು ತಮ್ಮ ಸ್ವಂತ ಸಂಬಂಧಿಕರೊಂದಿಗೆ ನೆಲೆಸಿದ್ದರು. ಇವರ ಜಮೀನಿನ ನೆರೆ ಕರೆಯಲ್ಲಿರುವ ಆರೇಳು ಕುಟುಂಬಸ್ತರ ಬಿಟ್ಟಿ ಕೆಲಸಗಳು ನೆರವಿನಿಂದ ಸುಖ ಜೀವನ ನಡೆಸುತ್ತಿದ್ದರು. ಈ ರೀತಿ ರಾಜನ ಹೆಸರಿನಲ್ಲಿದ್ದ ಜಮೀನನ್ನು "ಪನ್ಯ"ಎಂದು ಹೆಸರಿಸಲಾಗಿದೆ.

ಈ ಹಿಂದೆ, ಸಂಶೋಧಕರೊಬ್ಬರು ಕೊಡಗು ಮತ್ತಿತರ ಜಿಲ್ಲೆಗಳಲ್ಲಿರುವ ಪನ್ಯ ಜಮೀನುಗಳ ವಿವರಗಳನ್ನು ಪತ್ರಿಕೆಯಲ್ಲಿ ಪ್ರಕಟಪಡಿಸಿದ್ದರು. ಆದರೆ ಸೋಮವಾರಪೇಟೆ ತಾಲ್ಲೂಕಿನ ಗರ್ವಾಲೆ ಗ್ರಾಮದಲ್ಲಿರುವ ಸುಮಾರು ಇನ್ನೂರು ಎಕ್ರೆಗಳಿಗೂ ಮಿಗಿಲಾಗಿರುವ ಪನ್ಯ ಜಾಗದ ವಿವರ ಕಾಣಿಸಿರಲಿಲ್ಲ. ಸಾರ್ವಜನಿಕರ ತಿಳುವಳಿಕೆ ಬಗ್ಗೆ ಈಸಂಬಂದ ಇಲ್ಲಿಯ ಕೆಲವು ಹಿರಿಯವರ ಅನಿಸಿಕೆ ಮೂಲಕ ತಿಳಿದು ಬಂದ ವಿಚಾರಗಳನ್ನು ತಿಳಿಯಪಡಿಸಬೇಕಾಗಿದೆ.

ಗರ್ವಾಲೆ ಗ್ರಾಮದ, ತಾಕೇರಿ ಗ್ರಾವಕ್ಕೆ ಹೋಗುವ, ಮುಖ್ಯರಸ್ತೆ ಯಿಂದ ಒಂದು ಕಿ.ಮೀ ದೂರದಲ್ಲಿರುವ, ಅರಮನೆಯ ಅವಶೇಷಗಳನ್ನುಈಗಲೂ ಕಾಣಬಹುದು. ಹೆಬ್ಬಾಗಿಲಿನ ಶಿಲಾ ಚೌಕಟ್ಟು, ಕೆರೆ, ಬಸವ ಪ್ರತಿಮೆ ರಕ್ಷಣೆಗಾಗಿ ಅರಮನೆಯ ಸುತ್ತಲೂ ತೊಡಿದ್ದ ಆಳ ಮತ್ತು ಅಗಲವಾದ ಕಂದಕಗಳು ಈಗಲೂ ಇವೆ. ಅರಮನೆ ಇದ್ದ ಜಾಗದ ಸರ್ವೆಸಹ, ಈ ಹಿಂದೆ ಸರಕಾರದವರು ಮಾಡಿದ್ದಾರೆ. ಇತ್ತೀಚೆಗೆ ನಿರ್ಮಿಸಿದ ಜೇನು ಕೇಂದ್ರದ ಒಂದು ಕಟ್ಟಡವೂ ಸಹ ಇದೆ. ಈಗ ಈ ಸ್ಥಳ ಮಾತ್ರ ಪೈಸಾರಿಯಾಗಿದೆ.

ಮಡಿಕೇರಿಯಲ್ಲಿ ಆಳುತ್ತಿದ್ದ ದೊಡ್ಡ ವೀರರಾಜನಿಗೆ ಕಾರಣಾಂತರ ದಿಂದ ಬುದ್ಧಿ ಭ್ರಮಣೆಯುಂಟಾಗಿ ತನ್ನ ನಂತರ ಪಟ್ಟಕ್ಕೆ ವಂಶದ ಯಾರ್‍ಯಾರೋ ಬಂದಾರೆಂಬ ಸಂಶಯದಿಂದ ತನ್ನ ದೂರದ ಸಂಬಂಧಿಕರ ಕುತ್ತಿಗೆ ಕತ್ತರಿಸಿ ರುಂಡಗಳನ್ನು ತಂದು ತೋರಿಸ ಬೇಕೆಂದು ಕಟ್ಟಾಜ್ಞೆ ವಿಧಿಸಿದ್ದರಂತೆ. ಆಗಿನ ರಾಜಾಜ್ಞೆಎಂದರೆ ಎದುರುತ್ತರ ಕೊಡದೆ ಆಜ್ಞೆಯನ್ನು ಪಾಲಿಸಬೇಕಾಗಿತ್ತು. ಅದರಂತೆ ರಾಜರ ಖಾಸಗೀ ಬಟರು ರಾಜ್ಯದ ಬೇರೆ ಬೇರೆ ಊರುಗಳಲ್ಲಿರುವ ರಾಜ ಸಂತತಿಯ ಗಂಡಸರ ರುಂಡಗಳನ್ನು ಕತ್ತರಿಸಿ ತರಲು ಹೋದ ಸ್ವಲ್ಪ ಸಮಯದಲ್ಲಿಯೇ ರಾಜನಿಗೆ ಬುದ್ಧಿ ಸ್ವಾಧೀನಕ್ಕೆ ಬಂದು ತನ್ನ ಮೊದಲಿನ ಆಜ್ಞೆಯನ್ನು ರದ್ದುಪಡಿಸಿ, ಕೂಡಲೇ ತಲೆಕಡಿಯಬಾರದಾಗಿ ಮರು ಆಜ್ಞೆ ಕಳುಹಿಸಿದ್ದನು.ಹತ್ತಿರ ದಲ್ಲಿದ್ದವರಿಗೆಲ್ಲಾ ಈ ಮರು ಆಜ್ಞೆ ತಲುಪಿತಾದರೂ ಅತೀ ದೂರದಲ್ಲಿರುವ ಗರ್ವಾಲೆಗೆ ಎರಡನೇ ಆಜ್ಞೆ ಬರುವುದರೊಳಗೆ ಅಪ್ಪಾಜಿರಾಜನ (ಆಗಿನ ರಾಜವಂಶದವರನ್ನೆಲ್ಲಾ ಹೆಸರಿನ ನಂತರ ರಾಜ ಎಂದೇ ಕರೆಯುವ ರೂಡಿ ಇದ್ದಿರಬಹುದು)ರುಂಡ ಕತ್ತರಿಸಿ ಆಗಿತ್ತಂತೆ. ನಂತರ (ಇತರ ಕಡೆಗಳಲ್ಲಿ ಏನಾಯಿತೊ) ಗರ್ವಾಲೆಯಲ್ಲಂತೂ ರಾಜ ವಂಶದವರಾರೂ ಮತ್ತೆ ಬಾರದೆ ಆ ರಾಜನ ಸ್ವಂತ ಜಮೀನಾಗಿದ್ದಪನ್ಯ ಜಮೀನೆಲ್ಲವನ್ನೂ ನೆರೆಕರೆಯವರ ಹೆಸರಿಗೆ ವರ್ಗಾಯಿಸಿರುವರೆಂದು ಪ್ರತೀತಿ. ಇವೆಲ್ಲದರ ಮೂಲ ಆಧಾರ ಎಲ್ಲಿ ಲಭ್ಯವೋ ತಿಳಿಯೆನು.

ಗರ್ವಾಲೆಯಲ್ಲಿದ್ದ ಅಪ್ಪಾಜಿ ರಾಜನ, ಪನ್ಯದ ಆಸ್ತಿಯೆಲ್ಲಾ ನೆರೆಕರೆಯ ಕುಟುಂಬಸ್ತರಾದ ಗೀಜಿಗಂಡ, ಚೋಕಂಡ, ಬಾಚಳಿರ ಆಮುಡಿಯಂಡ, ಹಾಕಿರ, ತಂಬ್ಲುಗೇರಿರ (ಈಗ ತಂಬುಗುತ್ತಿರ) ಈ ಕುಟುಂಬಸ್ತರಿಗೆ ಕೆಲವು ವಿಶೇಷ ರಿಯಾಯಿತಿಯಲ್ಲಿ ವಹಿಸಿಕೊಟ್ಟಿದ್ದಾರೆ. ಈ ರೀತಿ ವಹಿಸಿಕೊಡಲು ಮುಖ್ಯ ಕಾರಣ ಈ ಕುಟುಂಬದವರು ಅಪ್ಪಾಜಿ ರಾಜನ ಸುಖಜೀವನಕ್ಕೆ ಕೈ ತುಂಬಾ ನೆರವಾದವರು. ಮೇಲ್ಕಾಣಿಸಿದ ಕುಟುಂಬಸ್ತರ ಪೈಕಿ ಚೋಕಂಡ ಕುಟುಂಬದವರು ನಿರ್‌ಸಂತತಿಯಾಗಿ ಅವರ ಆಸ್ತಿಯನ್ನು ಪಡೆದವರಿಗೆ ಪನ್ಯಾಸ್ತಿಯು ಯಾವ ರೀತಿ ಕೈ ತಪ್ಪಿಹೋಯಿತೋ ತಿಳಿಯದು. ಅಲ್ಲದೆ ಹೊಸದಾಗಿ ಪಾಸುರ ಮತ್ತು ಕನ್ನಿಗಂಡ ಕುಟುಂಬಸ್ತರು ಮೇಲ್ಕಾಣಿಸಿದ ಹಾರೇರ ಕುಟುಂಬಸ್ತರ ಹಕ್ಕಿನ ಆಸ್ತಿಯನ್ನು (exchange)ಮಾಡುವುದರಿಂದಲೋ ಕ್ರಯಕ್ಕೆ ಪಡೆದೊ ಈ ಪನ್ಯದ ಆಸ್ತಿಯ ಹಕ್ಕುದಾರರಾಗಿರುತ್ತಾರೆ. ಈ ಆಸ್ತಿಯಭತ್ತದ ಗದ್ದೆಗಳನ್ನು ಮಾತ್ರ ಆಯಾ ಕುಟುಂಬಸ್ತರ ಕೆಲವರು ತಮ್ಮಿಚ್ಚೆ ಬಂದಂತೆ ತೋಟವಗೈರೆ ಮಾಡಿಕೊಂಡಿದ್ದರು. ಅಲ್ಲಿಂದ ನನಗೆ ತಿಳಿದಂತೆ ಈ ಕೆಳಗಿನ ಕ್ರಮಗಳಾಗಿವೆ.

ದಿನಾಂಕ 20-10-1965ರಂದು ಸಂಬಂಧಪಟ್ಟ ಕುಟುಂಬದ ಮುಖ್ಯಸ್ತರೆಲ್ಲಾ ಸೇರಿ, .ಸುಮಾರು ಇನ್ನೂರು ಎಕ್ರೆಗಳಿಗೂ ಮಿಗಿಲಾಗಿರುವ ಪನ್ಯದ ಅರಣ್ಯಪ್ರದೇಶಗಳನ್ನೆಲ್ಲಾ ಆಯಾ ಕುಟುಂಬದ ಮೆಜಾರಿಟಿಗೆ ಬಂದವರ ಹೆಸರಿನಲ್ಲಿ ಪ್ರತೀ ಕುಟುಂಬಸ್ತರಿಗೂ ನಮೂದಿಸಿದ ಪ್ರದೇಶಗಳಲ್ಲಿ ಸರ್ವೆ ಮಾಡಿಸಿಸುಮಾರು 48ಜನರಿಗೆ ವಿಲೇವಾರಿ ಮಾಡಿಕೊಳ್ಳುವಂತೆ ತೀರ್ಮಾನಿಸಿ ಒಂದು ಒಪ್ಪಂದ ಮಾಡಲಾಯಿತು.

---

ನಿಧನ

ಬಲ್ಲಮಾವಟಿ ಗ್ರಾಮದ ಹಿರಿಯರು, ಸ್ವಾತಂತ್ರ್ಯ ಹೋರಾಟಗಾರರಾದ ಎಡಿಕೇರಿ ಉತ್ತಯ್ಯನವರು ಜುಲೈ 8ರಂದು ನಿಧನರಾದರು. ಮೃತರು ಪತ್ನಿ, 6ಜನ ಪುತ್ರಿಯರನ್ನು ಅಗಲಿದ್ದು ದಿವಂಗತರ ಅಂತ್ಯಕ್ರಿಯೆ ಜುಲೈ ೧೧ರಂದು ಸ್ವಗ್ರಾಮದಲ್ಲಿ ನಡೆಯಿತು. ಇವರ ಸ್ವಪರಿಚಯವನ್ನು ಕೊಡಗು ಸಂಗಾತಿಯು 1997ರ ಇಸವಿಯ ಸಂಪುಟ1, ಸಂಚಿಕೆ 11ರಲ್ಲಿ ಇವರ ವ್ಯಕ್ತಿ ಪರಿಚಯವನ್ನು ನೀಡಿತ್ತು.

---

# ಶುಭಾಶಯಗಳು



*ಕ್ಯಾಪ್ಟನ್ ವೈ.ಕೆ. ಚಂದನ್ ಬಿ.ಇ*
*(S/o ಶ್ರೀಮತಿ ಮತ್ತು ಶ್ರೀ ಯಾಲದಾಳು*
*ಡಿ. ಕೇಶವಾನಂದ, ಡಿ.ವೈ. ಎಸ್.ಪಿ., ಕಾರ್ಕಳ)*

ಮತ್ತು

*ಕೆ.ಎ. ಮಂತನ್ (ಬಿ.ಡಿ.ಎಸ್)*
*(D/o ಶ್ರೀಮತಿ ಮತ್ತು ಶ್ರೀ ಕೆ. ಎಸ್ ಆನಂದ,*
*ಡಿ.ಎಫ್.ಓ. ಕನಕ ಮಜಲು ಬೆಂಗಳೂರು)*

**ವಿವಾಹ ದಿನಾಂಕ : 21-5-2000**

ನಿಮ್ಮ ನವ ದಾಂಪತ್ಯ ಜೀವನವು ಸುಖಮಯವಾಗಿರಲೆಂದು ಹಾರೈಸುವ ಮತ್ತು ತಾ|| 2-7-2000ದಂದು ಕ್ಯಾಪ್ಟನ್ ಆಗಿ ಬಡ್ತಿ ಹೊಂದಿರುವುದಕ್ಕೆ ಶುಭಾಶಯವನ್ನು ಕೋರುತ್ತಾ ನಮ್ಮ ಕುಲದೇವರಾದ ಶ್ರೀ ವೆಂಕಟರಮಣ ಮತ್ತು ಶ್ರೀ ಕಾವೇರಿ ಮಾತೆಯು ಆಯುರಾರೋಗ್ಯ ಸಂಪತ್ತನ್ನು ಕೊಟ್ಟು ಕಾಪಾಡಲಿ ಎಂದು ಪ್ರಾರ್ಥಿಸುವ,

*ಯಿಂದ :*

ಶ್ರೀಮತಿ ಮತ್ತು ಶ್ರೀ ಯಾಲದಾಳು ಡಿ. ಉತ್ತಯ್ಯ ಮತ್ತು ಮಕ್ಕಳು, ಗಾಳಿಬೀಡು
ಶ್ರೀಮತಿ ಮತ್ತು ಶ್ರೀ ಯಾಲದಾಳು ಡಿ. ಕೇಶವಾನಂದ ಮತ್ತು ಚೇತನ್ ಕಾರ್ಕಳ
ಶ್ರೀಮತಿ ಮತ್ತು ಶ್ರೀ ಯಾಲದಾಳು ಡಿ. ಮೋಹನ್ ಮತ್ತು ಮಕ್ಕಳು ಗಾಳಿಬೀಡು
ಶ್ರೀಮತಿ ಮತ್ತು ಶ್ರೀ ಯಾಲದಾಳು ಡಿ. ಸೋಮಯ್ಯ ಮತ್ತು ಮಕ್ಕಳು
ಶ್ರೀಮತಿ ಪಾರೆ ಮಜ್ಲು ವಿಶಾಲಾಕ್ಷಿ ಪುಟ್ಟಯ್ಯ, ಮುತ್ತಾರ್ಮುಡಿ
ಶ್ರೀಮತಿ ಮತ್ತು ಶ್ರೀ ಪಾರೆಮಜ್ಲು ರವಿಕುಮಾರ್, ಮುತ್ತಾರ್ಮುಡಿ
ಶ್ರೀಮತಿ ಮತ್ತು ಶ್ರೀ ಬಾಲಗಂಗಾಧರ, ಮುತ್ತಾರ್ಮುಡಿ
ಶ್ರೀಮತಿ ಮತ್ತು ಶ್ರೀಕುಸುಮ ಕಾರ್ಯಪ್ಪ, ಮುತ್ತಾರ್ಮುಡಿ
ಮತ್ತು ಬಂಧು ಮಿತ್ರರು

## ರಾಷ್ಟ್ರೀಯ ಕರಾಟೆ ಪಂದ್ಯಾವಳಿಯಲ್ಲಿ ಚಿನ್ನದ ಪದಕವನ್ನು ಗಳಿಸಿದ ಶ್ರೀ ಪಡಿಕಲ್ ಅನಂತ್ ಮಾದಪ್ಪ



ಆಲ್ ಇಂಡಿಯಾ ಶಿಟೋರಿಯಾ ಕರಾಟೆ ಡೋ ಅಸೋಸಿಯೇಶನ್ ಮತ್ತು ಕಾಂಚನ್ ಜುಂಗಾ ಶಿಟೋರಿಯಾ ಕರಾಟೆ ಅಸೋಸಿಯೇಶನ್‌ಗಳ ವತಿಯಿಂದ ಪಶ್ಚಿಮ ಬಂಗಾಳದ ಕುರ್ಸಂಗ್‌ನಲ್ಲಿ ಇತ್ತೀಚೆಗೆ ನಡೆದ ಮೂರನೇ ರಾಷ್ಟ್ರೀಯ ಮಟ್ಟದ ಶಿಟೋರಿಯಾ ಕರಾಟೆ ಪಂದ್ಯಾವಳಿಯಲ್ಲಿ ಸೆನ್ಸಾಯ್ ಚೆಪ್ಪುಡಿರ ಅರುಣ್ ಮಾಚಯ್ಯನವರ ನೇತೃತ್ವದಲ್ಲಿ ಭಾಗವಹಿಸಿ ಸಮಗ್ರ ಪ್ರಶಸ್ತಿಯನ್ನು ಪಡೆದುಕೊಂಡ ಕರ್ನಾಟಕ ತಂಡದಲ್ಲಿ ಕೊಡಗಿನ ತಂಡದವರಾದ ಕರಾಟೆ ಪಟು ಶ್ರೀ ಪಡಿಕಲ್ ಅನಂತ್ ಮಾದಪ್ಪನವರು 75 K.G above heavy wight ನ ವಿಭಾಗದಲ್ಲಿ fight ಮಾಡಿ ಚಿನ್ನದ ಪದಕವನ್ನು ತನ್ನದಾಗಿಸಿ ಕೊಂಡಿರುವರು.

ಶ್ರೀ ಪಡಿಕಲ್ ಅನಂತ್ ಮಾದಪ್ಪನವರು 16-6-1966 ರಲ್ಲಿ ಶ್ರೀ ಪಡಿಕಲ್ ಮಾದಪ್ಪ ಮತ್ತು ಸೀತಮ್ಮನವರ ಪುತ್ರರಾಗಿ ಗೋಣಿಕೊಪ್ಪಲುವಿನ ಕೈಕೇರಿ ಗ್ರಾಮದ ಪಡಿಕಲ್ ಮನೆಯಲ್ಲಿ ಜನಿಸಿದರು. ಶ್ರೀಯುತರಿಗೆ ಎರಡು ಜನ ಸಹೋದರಿಯರು, ಓರ್ವ ಸಹೋದರನು ಇರುವನು. ಇವರ ತಂದೆ ಮಾದಪ್ಪನವರು ವಿರಾಜ್‌ಪೇಟೆ ತಾಲೂಕಿನ ಗೌಡ ಸಮಾಜದ ಅಧ್ಯಕ್ಷರು, ಸಮಾಜ ಸೇವಕರು, ಮತ್ತು ಉತ್ತಮ ಕೃಷಿಕರು ಆಗಿರುವರು. ಇವರ ತಾಯಿ ಶಿಕ್ಷಕಿಯಾಗಿ ಸೇವೆ ಸಲ್ಲಿಸಿ ಈಗ ತಮ್ಮ ಉದ್ಯೋಗದಿಂದ ನಿವೃತ್ತಿಯಾಗಿರುವರು. ಇವರ ಪತ್ನಿ ಗೀತ ಗೋಣಿಕೊಪ್ಪಲುವಿನ ದಿವಂಗತ ಮಲ್ಲೇಂಗಡ ಮೊಣ್ಣಪ್ಪ ಗಂಗಮ್ಮನವರುಗಳ ಏಕ ಮಾತ್ರ ಪುತ್ರಿಯಾಗಿರುವರು. ಇವರಿಗೆ ಕಲ್ಪಿತ ಎಂಬ ಹೆಸರಿನ ಎರಡು ವರ್ಷದ ಓರ್ವ ಪುತ್ರಿ ಇರುವಳು.

ಇವರು ತಮ್ಮ ಓದುಗಾರಿಕೆಯನ್ನು ತಮ್ಮ ಹುಟ್ಟೂರಾದ ಗೋಣಿ ಕೊಪ್ಪಲುವಿನಲ್ಲಿ ಮುಗಿಸಿ ಮದ್ರಾಸಿನಲ್ಲಿ ಆಟೋ ಮೊಬಾಯಿಲ್ ಇಂಜಿನಿಯರಿಂಗ್ ಮುಗಿಸಿ ಅಲ್ಲಿಯೇ T.V.S. ಕಂಪೆನಿಯಲ್ಲಿ ತರಬೇತನ್ನು ಪಡೆದಿರುವರು. ಅಲ್ಲದೆ ಗೋಣಿ ಕೊಪ್ಪಲುವಿನಲ್ಲಿ ಕರಾಟೆ ತರಬೇತನ್ನು ಪಡೆದು Block Belt ನ್ನು ಪಡೆದು ಕೊಂಡಿರುವರು. ಇವರು ಯಾವ ದುರಾಭ್ಯಾಸಗಳಿಲ್ಲದ ಒಬ್ಬ ಮಹಾನುಭಾವ. ಇವರು ಟಿ.ವಿ. ಧಾರವಾಹಿಯಲ್ಲಿ ಮರೀಚಿಕೆ ಮತ್ತು ಗಂಧದ ಗುಡಿ ಭಾಗ ೨ ಚಲನ ಚಿತ್ರಗಳಲ್ಲಿ ಅಭಿನಯಿಸಿರುವರು. ಇವರು ತಾನು ಹಿಡಿದ ಕೆಲಸವನ್ನು ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ, ಹಠಸಾಧನೆಯಿಂದ ಶ್ರಮವಹಿಸಿ ದಕ್ಕಿಸಿಕೊಳ್ಳುವ ಒಬ್ಬ ಕಟ್ಟುನಿಟ್ಟಿನ ದಿಟ್ಟ ವ್ಯಕ್ತಿ. ಇವರಿಗೆ ಅರೆಭಾಷಿಕ ಜನಾಂಗದ ಪರವಾಗಿ ಕೊಡಗು ಸಂಗಾತಿ ಶುಭವನ್ನು ಕೋರುತ್ತದೆ.

## ಎರಡನೇ ವರ್ಷದ ಹುಟ್ಟು ಹಬ್ಬದ ಶುಭಾಶಯಗಳು



ಪಡಿಕಲ್ ಕಲ್ಪಿತ ಅನಂತ್
*ಜನನ: 21-7-1998*

*ಶುಭ ಕೋರುವವರು ಕಂದಮ್ಮನ*

*ಅಜ್ಜ ಅಜ್ಜಿ : ಪಡಿಕಲ್ ಮಾದಪ್ಪ, ಸೀತಮ್ಮ,*
*ಅಜ್ಜಿ : ಮಲ್ಲೇಂಗಡ ಗಂಗಮ್ಮ ಮೊಣ್ಣಪ್ಪ*
*ತಂದೆ ತಾಯಿ : ಪಡಿಕಲ್ ಅನಂತ್, ಗೀತ,*
*ದೊಡ್ಡ ಮಾವ ಅತ್ತೆ : ಎಸ್. ಎಲ್. ಅಶ್ವಥ್, ಭುವನ ಮಗ ಹರ್ಷಿತ್, ಹಾಸನ,*
*ಚಿಕ್ಕಮಾವ ಅತ್ತೆ : ಜಪ್ಪೆಕೋಡಿ ಮನುಗುಣ ಮಗಳು ಗ್ರಂಥ,*
*ಚಿಕ್ಕ ತಂದೆ : ಪಡಿಕಲ್ ಸಂತೋಷ್ ಮಾದಪ್ಪ*
*ಗೋಣಿ ಕೊಪ್ಪಲು, ದ. ಕೊಡಗು.*

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ : **0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.